# ಹರಿಣಶಿಕಾರಿ ಸಮುದಾಯದ ಮಹಿಳೆಯರ ಬದುಕು

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ

ಸಂಶೋಧಕರು

ಶಶಿಕಲಾ ರಾಠೋಡ

ಮಾರ್ಗದರ್ಶಕರು

ಡಾ. ವಿಠ್ಠಲರಾವ್ ಟಿ. ಗಾಯಕ್ವಾಡ್
ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ



ಭಾಷಾ ನಿಕಾಯ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ-೫೮೩ ೨೭೬

೨೦೦೯

# ಹರಿಣಶಿಕಾರಿ ಸಮುದಾಯದ ಮಹಿಳೆಯರ ಬದುಕು

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ

ಸಂಶೋಧಕರು

ಶಶಿಕಲಾ ರಾಠೋಡ

ಮಾರ್ಗದರ್ಶಕರು

ಡಾ. ವಿಠ್ಠಲರಾವ್ ಟಿ. ಗಾಯಕ್ವಾಡ್

ಪ್ರಾಧ್ಯಾಪಕರು

ಭಾಷಾಂತರ ಅಧ್ಯಯನ ವಿಭಾಗ






ಭಾಷಾ ನಿಕಾಯ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ-೫೮೩ ೨೭೬

೨೦೦೯

# ಮಾರ್ಗದರ್ಶಕರ ಪ್ರಮಾಣ ಪತ್ರ

**ಹರಿಣಶಿಕಾರಿ ಸಮುದಾಯದ ಮಹಿಳೆಯರ ಬದುಕು** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ, ಮಹಿಳಾ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಶಶಿಕಲಾ ರಾಠೋಡ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 13.10.09


**ಡಾ. ವಿಠ್ಠಲರಾವ್ ಟಿ. ಗಾಯಕ್ವಾಡ್**
ಮಾರ್ಗದರ್ಶಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

# ಪ್ರಮಾಣ ಪತ್ರ

**ಹರಿಣಶಿಕಾರಿ ಸಮುದಾಯದ ಮಹಿಳೆಯರ ಬದುಕು** ಎಂಬ ನಿಬಂಧವನ್ನು ಡಾ. ವಿಠ್ಠಲರಾವ್ ಟಿ. ಗಾಯಕ್ವಾಡರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಭಾಷಾ ನಿಕಾಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧ ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 13/10/09

**(ಶಶಿಕಲಾ ರಾಠೋಡ)**
ಸಂಶೋಧನಾ ವಿದ್ಯಾರ್ಥಿನಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

# ಪರಿವಿಡಿ

## ಅಧ್ಯಾಯ ಒಂದು

# ಹರಿಣಶಿಕಾರಿ ಸಮುದಾಯದ ಮಹಿಳೆಯರ ಬದುಕು

೧.೧ ಅಧ್ಯಯನ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ

೧.೩ ಅಧ್ಯಯನದ ವೈಧಾನಿಕತೆ

## ಅಧ್ಯಾಯ - ಒಂದು

# ಹರಿಣ ಶಿಕಾರಿ ಸಮುದಾಯದ ಮಹಿಳೆಯರ ಬದುಕು

### ಅಧ್ಯಯನ ಒಂದು ಹರಿಣ ಶಿಕಾರಿ ಸಮುದಾಯದ ಬದುಕಿನ ಸ್ವರೂಪ

ಮನುಕುಲದ ಆರಂಭದಿಂದಲೂ ಮಾನವ ಹಲವು ಬಗೆಯ ಸಮುದಾಯಗಳಲ್ಲಿ ವಾಸಿಸುತ್ತಿರುವುದು ಕಂಡುಬಂದಿದೆ. 'ಸಮುದಾಯವು' ಒಂದು ಸಾಮಾಜಿಕ ಘಟಕವಾಗಿದೆ. ಮಾನವನ ಅಲೆಮಾರಿ ಜೀವನವು ಅನೇಕ ಹಂತಗಳಲ್ಲಿ ಹಂಚಿ ಹೋಗುವುದರ ಮೂಲಕ ಅದು ಕಾಲಕ್ರಮೇಣ ಅನೇಕ ಹಂತಗಳಲ್ಲಿ ಸಾಗಿ, ಇಂದು ನಾಗರಿಕತೆಯನ್ನು ಪಡೆದುಕೊಂಡಿದೆ. ಒಂದು ಸಮುದಾಯದ ಜನರ ಜೀವನ ವಿಧಾನವನ್ನು 'ಸಂಸ್ಕೃತಿ' ಎನ್ನಬಹುದು. ಈ ಸಂಸ್ಕೃತಿಯಲ್ಲಿ ಏಕತೆಯನ್ನು ಬಹುತೇಕ ಸಾಂಸ್ಕೃತಿಕ ಏಕರೂಪತೆಯನ್ನು ಕಾಮಬಹುದು. ಉದಾಹರಣೆಗೆ ಬುಡಕಟ್ಟು ಸಮುದಾಯಗಳು ತಮ್ಮದೇ ಆದ ವಿಭಿನ್ನ ಪ್ರಕಾರದ ಸಂಸ್ಕೃತಿಯನ್ನು ಹೊಂದಿರುತ್ತವೆ. ಅವರು ಒಂದು ನಿರ್ದಿಷ್ಟ ಪ್ರದೇಶಗಳಲ್ಲಿ ಸಮೂಹಗಳ ರೂಪದಲ್ಲಿ ಸಮುದಾಯಗಳನ್ನು ಕಟ್ಟಿಕೊಂಡು ತಮ್ಮದೇ ಆದ ಆಚರಣೆ, ಸಂಪ್ರದಾಯ, ಸಾಂಸ್ಕೃತಿಕ ರೂಪರೇಷೆಗಳನ್ನು ಹೆಣೆದುಕೊಂಡಿರುತ್ತಾರೆ.

ಪ್ರಾಚೀನ ಕಾಲದಲ್ಲಿ ಅಲೆಮಾರಿ ಜೀವನ ಸಾಗಿಸುತ್ತಿದ್ದ ಮಾನವ ಒಂದು ಕಡೆ ನೆಲೆನಿಂತು ಸಾಮೂಹಿಕ ಜೀವನ ನಡೆಸಿಕೊಂಡು ಬರುವುದರ ಮೂಲಕ ಸಮುದಾಯಗಳ ಪರಿಕಲ್ಪನೆ ಅಸ್ತಿತ್ವಕ್ಕೆ ಬಂದವು. ಆಗ ಸಮುದಾಯದ ಉಳಿವಿಗಾಗಿ, ಬೆಳವಣಿಗೆಗಾಗಿ, ಮಹಿಳೆಯರು ಮತ್ತು ಪುರುಷರು ಅನೇಕ ಚಟುವಟಿಕೆಗಳಲ್ಲಿ ತೊಡಗಿಕೊಂಡರು. ಆದರೆ ನಂತರದ ಕಾಲಘಟ್ಟಗಳಲ್ಲಿ ಮಹಿಳೆಯರನ್ನು ಸಂತಾನೋತ್ಪತ್ತಿ ಕ್ರಿಯೆಯ, ಮಕ್ಕಳ ಲಾಲನೆ-ಪಾಲನೆಯ ಜವಾಬ್ದಾರಿ ಹೊರಿಸಿ ಅವರನ್ನು ಕೌಟುಂಬಿಕ ವಲಯಕ್ಕೆ ಸ್ಥಿಮಿಕರಿಸಲಾಯಿತು. ಇಲ್ಲಿ ಪುರುಷರು ಪ್ರಧಾನತೆಯನ್ನು ಪಡೆದುಕೊಂಡು ಸಾರ್ವಜನಿಕ ವಲಯಕ್ಕೆ ಪ್ರವೇಶಿಸಿದರು. ಅಲ್ಲದೇ ಅನೇಕ ಧಾರ್ಮಿಕ ನಂಬಿಕೆಗಳನ್ನು, ಆಚರಣೆಗಳನ್ನು, ಸಂಪ್ರದಾಯದ ಕಟ್ಟುಪಾಡುಗಳನ್ನು ಮಹಿಳೆಯರ ಮೇಲೆ ಒತ್ತಾಯಪೂರ್ವಕವಾಗಿ ಹೇರುವುದರ ಮೂಲಕ ಅವರ ಚಲನವಲನವನ್ನು ನಿಯಂತ್ರಿಸಲಾಯಿತು. ಹೀಗೆ ಸಾಂಸ್ಕೃತಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು

ಮಹಿಳೆಯರ ಮೇಲೆ ನಿರ್ಬಂಧವನ್ನು ಹೇರುತ್ತಲೇ ಬಂದಿದೆ. ಇಂತಹ ಮೌಲ್ಯಧಾರಿತ ಕಟ್ಟುಪಾಡುಗಳನ್ನು ಅನೇಕ ಬುಡಕಟ್ಟು ಸಮುದಾಯಗಳಲ್ಲಿಯೂ ಕಾಣಬಹುದು.

ಭಾರತವು ಅತೀ ದೊಡ್ಡ ಬುಡಕಟ್ಟುಗಳನ್ನು ಹೊಂದಿರುವ ರಾಷ್ಟ್ರವಾಗಿದೆ. ೧೯೯೧ರ ಜನಗಣತಿಯ ಪ್ರಕಾರ ೫.೨೦ ಕೋಟಿ ಬುಡಕಟ್ಟು ಜನಸಂಖ್ಯೆ ಇರುವುದಾಗಿ ತಿಳಿದುಬರುತ್ತದೆ. ಭಾರತದಲ್ಲಿ ಒಟ್ಟು ೪೬೧ ಬುಡಕಟ್ಟು ಸಮುದಾಯಗಳನ್ನು ಗುರುತಿಸಲಾಗಿದೆ. ೧೯೯೧ರ ಜನಗಣತಿಯ ಪ್ರಕಾರ ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆ ೫೧.೬೨೮ ಇದ್ದು, ಅವರು ಪಂಜಾಬ ಮತ್ತು ಹರಿಯಾಣ ರಾಜ್ಯಗಳನ್ನು ಹೊರತುಪಡಿಸಿ ಇನ್ನುಳಿದ ಎಲ್ಲಾ ರಾಜ್ಯಗಳಲ್ಲಿ ಬುಡಕಟ್ಟು ಜನರು ಕಂಡುಬರುತ್ತಾರೆ. ಹೆಚ್ಚಿನ ಬುಡಕಟ್ಟುಗಳು ಮಧ್ಯಪ್ರದೇಶ, ಬಿಹಾರ, ರಾಜಸ್ಥಾನ, ಗುಜರಾತ, ಆಂಧ್ರಪ್ರದೇಶ, ಪಶ್ಚಿಮಬಂಗಾಳ ಮತ್ತು ಕರ್ನಾಟಕ ರಾಜ್ಯಗಳಲ್ಲಿ ಕಂಡುಬರುತ್ತಾರೆ. ಕರ್ನಾಟಕದಲ್ಲಿ ೧೯.೧೫.೬೫೧ರಷ್ಟು ಬುಡಕಟ್ಟಿನವರು ವಿವಿಧ ಜಿಲ್ಲೆಗಳಲ್ಲಿ ಹರಡಿಕೊಂಡಿದ್ದಾರೆ. ಇವುಗಳಲ್ಲಿ ಪ್ರಮುಖವಾದವುಗಳೆಂದರೆ ಮೇದರು, ಇರುಳರು, ಕಿನ್ನರಿ, ಜೋಗಿಯರು, ಬುಡುಬುಡುಕಿಯರು, ಹಗಲು ವೇಗಾರರು, ಸುಡಗಾಡು ಸಿದ್ಧರು ಮುಂತಾದವರು ಇಂಥವರಲ್ಲಿ ಹರಿಣ ಶಿಕಾರಿ ಸಮುದಾಯವು ಒಂದಾಗಿದೆ. ಇವರನ್ನು ಪರಿಶಿಷ್ಟ ಪಂಗಡದಲ್ಲಿ ಸೇರಿಸಲಾಗಿದೆ.

ಹರಿಣ ಶಿಕಾರಿ ಸಮುದಾಯದವರು ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಹರಡಿಕೊಂಡಿದ್ದಾರೆ. ಹರಿಣ ಶಿಕಾರಿ ಸಮುದಾಯದವರನ್ನು ಪ್ರಾದೇಶಿಕ ವ್ಯತ್ಯಾಸದ ಹಿನ್ನೆಲೆಯಲ್ಲಿ ಅನೇಕ ಹೆಸರಿನಿಂದ ಗುರುತಿಸಲಾಗಿದೆ. ನೀರ ಶಿಕಾರಿ, ಬಾಗ್ರಿ, ಬಾವರಿ, ವಾಗ್ರಿ, ಫಾನ್ಸ್ ಪರಡಿಸ್, ಪಾನ್ಸ್ ಪಾರ್ದಿ ಹೀಗೆ ಅನೇಕ ಹೆಸರುಗಳಿಂದ ಗುರುತಿಸಲ್ಪಡುತ್ತಾರೆ. ಹರಿಣ ಶಿಕಾರಿ ಎಂಬ ಪದದ ಮೂಲ ನೋಡಿದಾಗ ಹರಿಣ ಎಂದರೆ ಚಿಗುರೆ ಶಿಕಾರಿ ಎಂದರೆ ಬೇಟೆಯಾಡುವವರು ಅಂದರೆ ಚಿಗುರೆಯನ್ನು ಬೇಟೆಯಾಡುವವರು ಎಂದರ್ಥವುಳ್ಳದಾಗಿದೆ. ಆದರೆ ಇವರು ಭಾಷೆ ಮರಾಠಿ, ಲಂಬಾಣಿ ಮತ್ತು ಗುಜರಾತಿ ಮಿಶ್ರಿತ ಅಪಭ್ರಂಶ ಭಾಷೆಯನ್ನು ಆಡುತ್ತಾರೆ. ಬೇಟೆಯಾಡುವುದು ಅವರ ಮೂಲ ವೃತ್ತಿಯಾಗಿದ್ದು, ಕಾಲಕ್ರಮೇಣ ಸರಕಾರ ಕೈಗೊಂಡಿರುವ ಅರಣ್ಯ ಸಂರಕ್ಷಣೆ ಕಾಯ್ದೆಯಿಂದಾಗಿ ಕಾಡಿನ ಮೂಲ ಉತ್ಪನ್ನಗಳ ಮೇಲೆಯೇ ಅವಲಂಬಿತವಾಗಿರುವ ಈ ಸಮುದಾಯವು ಅತಂತ್ರ ಸ್ಥಿತಿಗೆ ತಲುಪುವಂತಾಯಿತು. ಹೀಗಾಗಿ ಮುಂದೆ ಇವರು ತಮ್ಮ ಜೀವನದ ಉಳಿವಿಗಾಗಿ, ಹೊಟ್ಟೆ ಪಾಡಿಗಾಗಿ, ಕಳ್ಳತನ ಮಾಡಲು ಪ್ರಾರಂಭಿಸದರು. ಹಾಗಾಗಿಯೇ ಇಂದಿಗೂ ಕೂಡಾ ಈ ಸಮುದಾಯವನ್ನು ಅಪರಾಧಿಕ ನೆಲೆಯಿಂದಲೇ ಗುರುತಿಸುತ್ತಾರೆ.

ಇಂದಿನ ನಗರೀಕರಣದ ಛಾಯೆಯು ಹರಿಣ ಶಿಕಾರಿ ಸಮುದಾಯದ ಮೇಲೆ ಸ್ವಲ್ಪಮಟ್ಟಿನ ಪ್ರಭಾವ ಬೀರಿದ್ದರೂ ಕೂಡಾ ಅದು ತನ್ನ ಸಾಂಸ್ಕೃತಿಕ ಪರಂಪರೆಯನ್ನು ಕಾಪಾಡಿಕೊಂಡು ಬಂದಿದೆ. ಹರಿಣ ಶಕಾರಿ ಸಮುದಾಯದ ಬಗ್ಗೆ ಅನೇಕ ಸಮಾಜಶಾಸ್ತ್ರೀಯ ಅಧ್ಯಯನಗಳು ನಡೆದಿವೆ. ಆದರೆ ಎಲ್ಲಿಯೂ ಸಮುದಾಯದ ಮಹಿಳೆಯರ ಸ್ಥಾನ-ಮಾನಗಳನ್ನು ಗುರುತಿಸುವ ವಿಶ್ಲೇಷಿಸುವ ಪ್ರಯತ್ನ ಮಾಡಿಲ್ಲ. ಆದ್ದರಿಂದ ಹರಿಣ ಶಿಕಾರಿ ಮಹಿಳೆಯರ ಸಮಾಜೋ, ಆರ್ಥಿಕ, ಧಾರ್ಮಿಕ ಮತ್ತು ಶೈಕ್ಷಣಿಕ ಸ್ಥಿತಿ-ಗತಿಗಳ ಸ್ಥೂಲ ಅಧ್ಯಯನ ಕೈಗೊಳ್ಳಲಾಗಿದೆ.

ಈ ಹರಿಣ ಶಿಕಾರಿ ಸಮುದಾಯಕ್ಕೆ ಪ್ರಾರಂಭದಿಂದಲೂ ಸ್ಥಿರವಾದ ನೆಲೆಗಳಿಲ್ಲ. ಆದರೆ ಇತ್ತೀಚಿಗೆ ಸರ್ಕಾರ ಇವರಪಿಗೆ ಹಲವು ರೀತಿಯ ಸೌಲಭ್ಯ ನೀಡಿ ಮನೆಗಳನ್ನು ಕಟ್ಟಿಕೊಟ್ಟು ಒಂದು ಕಡೆ ನೆಲೆಸುವಂತೆ ಮಾಡಿದೆ. ಬಡತನ ರೇಖೆಗಿಂತ ಕೆಳಗಿರುವ ಈ ಜನಾಂಗವು ಪ್ರತಿಯೊಂದು ಕ್ಷೇತ್ರದಲ್ಲೂ ಹಿಂದುಳಿದಿದೆ. ಸಾಂಸ್ಕೃತಿಕವಾಗಿ ತನ್ನದೇ ಆದ ಅನನ್ಯತೆಯನ್ನು ಕಾಪಾಡಿಕೊಂಡ ಈ ಜನಾಂಗವು ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದೆ. ಅದರಲ್ಲೂ ಈ ಸಮುದಾಯದ ಮಹಿಳೆಯರ ಸ್ಥಿತಿಯಂತು ಚಿಂತಾಜನಕವಾಗಿದೆ. ಹೀಗಾಗಿ ಈ ಸಮುದಾಯದ ಮಹಿಳೆಯರ ಸ್ಥಿತಿ-ಗತಿಯನ್ನು ಕುರಿತು ಅಧ್ಯಯನಕ್ಕೆ ಒಳಪಡಿಸಿ ಅಧ್ಯಯನ ಮಾಡುವುದು ನನ್ನ ಉದ್ದೇಶವಾಗಿದೆ.

**ಅಧ್ಯಯನದ ಉದ್ದೇಶ**

ವಿವಿಧ ಜ್ಞಾನಶಿಸ್ತುಗಳನ್ನು ಅನುಲಕ್ಷಿಸಿದಾಗ ಅಲ್ಲಿ ಕೇವಲ ಪುರುಷ ನೆಲೆಯಿಂದಲೇ ವಿಷಯವನ್ನು ನಿರ್ವಚಿಸುತ್ತ ಹೋಗಿರುವುದನ್ನು ಕಾಣಬಹುದು. ಇಲ್ಲಿ ಮಹಿಳಾ ವಿಷಯವನ್ನಾಗಲೀ, ಮಹಿಳಾಪರ ಕಾಳಜಿಯನ್ನು ಹೊಂದಿದ ಚಿಂತನೆಗಳಾಗಲೀ, ಅಗೋಚರವಾಗಿರುವುದು, ಅನೇಕ ಸಾಮಾಜಿಕ ಸಮಸ್ಯೆಗಳನ್ನಾಧರಿಸಿ ವಿಶೇಷವಾದ ಸಂಶೋಧನಾ ಅಧ್ಯಯನಗಳು ಪ್ರಕಟಿತವಾಗಿವೆ. ಅವರಲ್ಲಿ ಸಮಾಜದ ಒಂದು ಪ್ರಮುಖ ಅಂಗವಾಗಿರುವ ಮಹಿಳೆಯರ ಬಗ್ಗೆ ಅಲ್ಪಸ್ವಲ್ಪ ಸಾಮಾನ್ಯೀಕರಿಸಿದ ದೃಷ್ಟಿಯ ನೆಲೆಯಲ್ಲಿ ಅರ್ಥೈಸುತ್ತಾ ಹೋಗಿವೆ. ಯಾವುದೇ ಒಂದು ಸಮುದಾಯದ ಮಹಿಳೆಯರನ್ನು ನೋಡಿದಾಗ ಅಲ್ಲಿ ಮೇಲ್ವರ್ಗದ ಮತ್ತು ಮಧ್ಯಮ ವರ್ಗದ ಮಹಿಳೆಯ ಸ್ಥಿತಿ-ಗತಿಗಳಿಗಿಂತ ಬುಡಕಟ್ಟು ಮಹಿಳೆಯರ ಸಮಸ್ಯೆಗಳ ರೂಪ ಭಿನ್ನವಾಗಿರುವುದು ಕಂಡುಬರುತ್ತದೆ. ಆದರೆ ಅವರೆಲ್ಲರ ಮೇಲಿನ ಶೋಷಣೆಯ ಸ್ವರೂಪ ಒಂದೇಯಾಗಿರುವುದು. ಆದ್ದರಿಂದ ನನ್ನ ಅಧ್ಯಯನ ವಿಷಯವಾದ ಹರಿಣ ಶಿಕಾರಿ ಸಮುದಾಯಗಳ ಮಹಿಳೆಯರ ಬದುಕು ಆಯ್ಕೆ ಮಾಡಿಕೊಳ್ಳುವುದರ ಮೂಲರ ಹರಿಣ ಶಿಕಾರಿ ಸಮುದಾಯದಲ್ಲಿನ ಸಂಪ್ರದಾಯ, ನಂಬಿಕೆ, ಆಚರಣೆಗಳು ಮಹಿಳಾ ಬದುಕಿನ ಸ್ಥಿತಿ-ಗತಿಗೆ ಹೇಗೆ ಸಾಕ್ಷಿಯಾಗಿವೆ? ಎಂಬುದನ್ನು ತಿಳಿಯುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

೧. ಹರಿಣ ಶಿಕಾರಿ ಮಹಿಳೆಯರ ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಶೈಕ್ಷಣಿಕ ಸ್ಥಿತಿ-ಗತಿಯನ್ನು ತಿಳಿಯುವುದು.

೨. ಹರಿಣ ಶಿಕಾರಿ ಸಮುದಾಯ ಕುರಿತಾದ ಸರಕಾರದ ಯೋಜನೆಗಳ ವಿಶ್ಲೇಷಣೆ ಮಾಡುವುದು.

ಕರ್ನಾಟಕದ ಹಲವು ಬುಡಕಟ್ಟುಗಳಲ್ಲಿ ಹರಿಣ ಶಿಕಾರಿ ಸಮುದಾಯವೂ ಒಂದು. ಪ್ರಾರಂಭದಲ್ಲಿ ಹಲವು ಬುಡಕಟ್ಟು ಸಮುದಾಯಗಳೊಂದಿಗೆ ಸಮ್ಮಿಳಿತವಾದರೂ ತನ್ನ ಆಚರಾ ವಿಚಾರಗಳನ್ನು ಬಿಡದೇ ಇಂದಿಗೂ ಪಾಲಿಸಿಕೊಂಡು ಬಂದಿದೆ. ಊರಿಂದ ಊರಿಗೆ ಅಲೆಯುತ್ತಿದ್ದ ಈ ಸಮುದಾಯವು ಇತ್ತೀಚೆಗೆ ಒಂದು ಕಡೆ ಸ್ಥಿರವಾಗಿ ನೆಲೆಯೂರಿದೆ. ಇಪ್ಪತ್ತೊಂದನೆಯ ಶತಮಾನದಲ್ಲೂ ಈ ಹರಿಣ ಶಿಕಾರಿ ಸಮುದಾಯವು ಸಮಾಜದ ಮುಖ್ಯವಾಹಿನಿಗೆ ಬರಲು ಪರದಾಡುತ್ತಿದೆ. ಅತ್ಯಂತ ಹಿಂದುಳಿದವರಾದ

ಇವರು ಅಕ್ಷರ ಜಗತ್ತಿನಿಂದ ತುಂಬ ದೂರವೇ ಇದ್ದಾರೆ. ಸರ್ಕಾರವು ಇವರಿಗೆ ಹಲವು ರೀತಿಯ ಸೌಲಭ್ಯಗಳನ್ನು ಒದಗಿಸಿದರೂ ಇದುವರೆಗೂ ನಾಗರಿಕತೆಯ ಸಂಪರ್ಕಕ್ಕೆ ಬಂದಿಲ್ಲ. ಪ್ರಾರಂಭದಿಂದಲೂ ಕಳ್ಳತನ, ದರೋಡೆಯನ್ನು ಮಾಡುತ್ತ ಬಂದಿರುವ ಈ ಸಮುದಾಯದ ಜನರನ್ನು ನೋಡುವ ದೃಷ್ಟಿಕೋನವೇ ಬೇರೆ ರೀತಿಯಲ್ಲಿದೆ. ಈ ರೀತಿಯ ಅತಂತ್ರ ಸ್ಥಿತಿಯಲ್ಲಿ ಬದುಕುತ್ತಿರುವ ಈ ಸಮುದಾಯದ ಮಹಿಳೆಯರ ಸ್ಥಿತಿ ಮತ್ತಷ್ಟು ಗಂಭೀರವಾಗಿದೆ. ಇವರು ಯಾವುದೇ ಕ್ಷೇತ್ರದಲ್ಲಿ ಮುಂದೆ ಬಾರದೆ ಪುರುಷಪಾಹಿ ವ್ಯವಸ್ಥೆಯ ಅಡಿಯಲ್ಲಿ ತಮ್ಮ ಕುಟುಂಬಕ್ಕೆ ಸೀಮಿತರಾಗಿದ್ದಾರೆ. ತಮ್ಮದೇ ಆದ ಕೆಲವೊಂದು ಸಂಪ್ರದಾಯಿಕ ಆಚರಣೆಗಳಿಂದ ಈ ಮಹಿಳೆ ಸಮಾಜದ ಮುಖ್ಯವಾಹಿನಿಗೆ ಬಾರದಂತಾಗಿದ್ದಾಳೆ. ಅನಕ್ಷರಸ್ಥರಾದ ಈ ಸಮುದಾಯದ ಮಹಿಳೆಯರು ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ಹಾಗೂ ಶೈಕ್ಷಣಿಕವಾಗಿ ತುಂಬ ಹಿಂದುಳಿದಿರುವರು. ಆದ್ದರಿಂದ ಈ ಸಮುದಾಯದ ಮಹಿಳೆಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಅಧ್ಯಯನ ಮಾಡುವುದು ಈ ಪ್ರಬಂಧದ ಉದ್ದೇಶಗಳಲ್ಲಿ ಒಂದಾಗಿದೆ. ಏಕೆಂದರೆ ಇವರು ಸ್ಥಿರವಾಗಿ ಒಂದಡೆ ನೆಲೆನಿಲ್ಲದೆ ಇರುವ ಕಾರಣ ಸರ್ಕಾರದ ಯಾವುದೇ ಸೌಲಭ್ಯಗಳು ದೊರೆಯದಂತಾಗಿದೆ. ಅಲ್ಲದೆ ಕೆಲವೊಂದು ಅಸಂಪ್ರದಾಯಕವಾದ ಆಚರಣಾ ಚೌಕಟ್ಟನ್ನು ಮೀರಿ ಬಾರದಂತೆ ಪುರುಷಪಾಹಿ ವ್ಯವಸ್ಥೆ ಮಹಿಳೆಯರ ಮೇಲೆ ದಿಗ್ಬಂದನ ಹೇರಿದೆ.

ಹೀಗಾಗಿ ಈ ಒಂದು ಪುರುಷಪಾಹಿ ವ್ಯವಸ್ಥೆಯ ಅಡಿಯಲ್ಲಿ ಸಿಲುಕಿ ಈ ಸಮುದಾಯದ ಮಹಿಳೆ ನಲುಗಿ ಹೋಗಿದ್ದಾಳೆ. ಆದ್ದರಿಂದ ಅವಳ ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ಪರಿಸ್ಥಿತಿಯ ಕುರಿತು ಗಂಭೀರವಾಗಿ ಚರ್ಚಿಸಲಾಗುವುದು.

ಕರ್ನಾಟಕದಲ್ಲಿರುವ ಹಲವಾರು ಬುಡಕಟ್ಟುಗಳು ಅಭಿವೃದ್ಧಿಗಾಗಿ ಸರ್ಕಾರ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳು ತುಂಬ ಪ್ರಯತ್ನಿಸುತ್ತಿವೆ. ಆದರೂ ಈ ಸಮುದಾಯಗಳು ಸಮಾಜದ ಮುಖ್ಯ ಪರಿಧಿಗೆ ಬರುವಲ್ಲಿ ಹಿನ್ನೆಡೆಯನ್ನು ಅನುಭವಿಸಿದೆ. ಈ ಹರಿಣ ಶಿಕಾರಿ ಸಮುದಾಯಕ್ಕೆ ಸರ್ಕಾರದಿಂದ ಜಾರಿಗೊಂಡ ಹಲವು ಯೋಜನೆಗಳಿಂದ ಇವರ ಅಭಿವೃದ್ಧಿ ಅಥವಾ ಸಫಲತೆ, ವಿಫಲತೆ ಕುರಿತು ವಿವರಿಸುವುದು ನನ್ನ ಅಧ್ಯಯನದ ಉದ್ದೇಶಗಳಲ್ಲಿ ಮತ್ತೊಂದಾಗಿದೆ. ಅಲೆಮಾರಿಗಳಾದ ಈ ಸಮುದಾಯಕ್ಕೆ ಪ್ರಾರಂಭದಲ್ಲಿ ಸ್ಥಿರವಾದ ನೆಲೆಗಳಿರಲಿಲ್ಲ. ತಮ್ಮದೇ ಆದ ಆಚಾರ-ವಿಚಾರಗಳನ್ನು ಹೊಂದಿರುವ ಇವರು ಸಾಂಸ್ಕೃತಿಕವಾಗಿ ತುಂಬ ವಿಶಿಷ್ಟರಾಗಿದ್ದಾರೆ. ಆದರೆ ಜನಸಂಪರ್ಕ, ಆಧುನಿಕತೆಯ ಪ್ರಭಾವದಿಂದ ಸಹಜವಾಗಿಯೇ ಇವರ ಸಾಂಸ್ಕೃತಿಕ ಆಚರಣಾ ಕ್ರಮದಲ್ಲಿ ಪಲ್ಲಟಗಳಾಗಿರುವ ಬಗೆಯನ್ನು ಕುರಿತು ಚರ್ಚಿಸುವುದು ಇಲ್ಲಿನ ಉದ್ದೇಶಗಳಲ್ಲಿ ಮಗದೊಂದಾಗಿದೆ.

**ಅಧ್ಯಯನದ ವ್ಯಾಪ್ತಿ**

ಯಾವುದೇ ಒಂದು ವಿಷಯದ ಅಧ್ಯಯನವು ನಿರ್ದಿಷ್ಟವಾದ ಚೌಕಟ್ಟನ್ನು ಹೊಂದಿರಬೇಕಾಗಿರುತ್ತದೆ. ನಿರ್ದಿಷ್ಟವಾದ ವ್ಯಾಪ್ತಿಯು ವಿಷಯದ ಅಧ್ಯಯನಕ್ಕೆ ಅನುಕೂಲತೆಯನ್ನು ಮಾಡಿಕೊಡುತ್ತದೆ. ಅದರಂತೆ ಹರಿಣ ಶಿಕಾರಿ ಸಮುದಾಯದ ಮಹಿಳೆಯರ ಬದುಕು ಎಂಬ ವಿಷಯಕ್ಕೆ ನಿರ್ದಿಷ್ಟವಾದ ಚೌಕಟ್ಟನ್ನು

ಹಾಕಿಕೊಳ್ಳಲಾಗಿದೆ. ಈ ಸಮುದಾಯ ಕುರಿತು ಸಂಶೋಧನಾತ್ಮಕ ಅಧ್ಯಯನಗಳು ನಡೆದಿದ್ದು ತುಂಬ ಕಡಿಮೆ, ಕೆಲವೊಂದು ಲೇಖನಗಳನ್ನು ಬಿಟ್ಟರೆ ಹೆಚ್ಚಿನ ಅಧ್ಯಯನಗಳು ನಡೆದಿಲ್ಲ. ಹೀಗಾಗಿ ಪ್ರಸ್ತುತ ಅಧ್ಯಯನವು ಬಿಜಾಪುರ ನಗರಕ್ಕೆ ಸೀಮಿತವಾಗಿದೆ. ಸುಮಾರು ೯೦೦ ಕುಟುಂಬಗಳಿಂದ ಕೂಡಿದ ಈ ಹರಿಣ ಶಿಕಾರಿ ಸಮುದಾಯವು ೩೦೦೦ ಜನಸಂಖ್ಯೆಯಿಂದ ಕೂಡಿದೆ. ಹೀಗಾಗಿ ಈ ಸಮುದಾಯದ ಅ೦ ಕುಟುಂಬಗಳನ್ನು ನನ್ನ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ**

ನಾಡಿನಲ್ಲಿ ವಿಶಿಷ್ಟ ರೀತಿಯ ಬದುಕನ್ನು ಕಟ್ಟಿಕೊಂಡ ಈ ಹರಿಣ ಶಿಕಾರಿ ಸಮುದಾಯವು ಆಧುನಿಕತೆಯ ಪ್ರಭಾವದಿಂದ ಅಲ್ಪಸ್ವಲ್ಪ ಬದಲಾದರೂ ತಮ್ಮ ಮೂಲ ಕಸಬನ್ನು ಇನ್ನೂ ಸಹ ಬಿಟ್ಟಿಲ್ಲ. ಕಳ್ಳತನ, ದರೋಡೆಗಳಲ್ಲಿ ಭಾಗಿಯಾಗುವ ಈ ಬುಡಕಟ್ಟು ಸಮುದಾಯ ಅಪರಾಧಿ ಪಟ್ಟಿಗೆ ಸೇರಿದೆ. ಈ ಸಂಪ್ರಬಂಧವು ಒಟ್ಟು ಏಳು ಅಧ್ಯಯನಗಳನ್ನು ಒಳಗೊಂಡಿದ್ದು, ಮೊದಲಿಗೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆಯನ್ನು ಕುರಿತು ಚರ್ಚಿಸುವುದಾಗಿದೆ. ಬಿಜಾಪುರ ನಗರದಲ್ಲಿ ವಾಸಿಸಿರುವ ಈ ಸಮುದಾಯದ ಬದುಕಿನ ಸ್ಥಿತಿ-ಗತಿಯ ಕುರಿತು ವಿವರಿಸಲಾಗುವುದು. ಅಲ್ಲದೇ ಈ ಜನಾಂಗದ ಮಹಿಳೆಯರ ಬದುಕು ಸಹ ಅತಂತ್ರ ಸ್ಥಿತಿಯಲ್ಲಿದೆ. ಪಾರಂಪರಿಕವಾಗಿ ಬಂದಂತಹ ಕೆಲವೊಂದು ಮೌಢ್ಯತೆಯಲ್ಲಿ ಸಿಲುಕಿದ ಈ ಸಮುದಾಯದ ಮಹಿಳೆ ಸಾಮಾಜಿಕ, ಧಾರ್ಮಿಕ, ಆರ್ಥಿಕ ಮತ್ತು ಶೈಕ್ಷಣಿಕವಾಗಿ ತುಂಬ ಹಿಂದುಳಿದಿದ್ದಾರೆ. ಹೀಗಾಗಿ ಇವರ ಈ ಮೇಲಿನ ಸಮಸ್ಯೆಗಳು ಕುರಿತು ಅಧ್ಯಯನ ಮಾಡುವುದು ಅವಶ್ಯಕವಾಗಿದೆ.

ಆಧುನಿಕತೆಯ ಅಬ್ಬರ ಪ್ರಭಾವಕ್ಕೆ ಇಂದು ಹಲವು ಸಮುದಾಯಗಳು ಒಳಗಾಗಿ ತಮ್ಮ ಮೂಲ ಚಹರೆಯನ್ನೇ ಕಳೆದುಕೊಂಡಿವೆ. ತಮ್ಮ ಆಚಾರ ವಿಚಾರಗಳಲ್ಲಿ ರೂಢಿ ಸಂಪ್ರದಾಯಗಳಲ್ಲಿ ಹಲವು ರೀತಿಯ ಬದಲಾವಣೆಯನ್ನು ಕಂಡುಕೊಂಡಿವೆ. ಕಾಡುಬಿಟ್ಟು ನಾಡನ್ನು ಸೇರಿದ ಈ ಸಮುದಾಯಗಳಲ್ಲಿ ನಾಗರಿಕತೆಯ ಪ್ರಭಾವಕ್ಕೆ ಒಳಗಾಗಿ ತನ್ನ ಸಾಂಸ್ಕೃತಿಕ ಅಂಶಗಳಲ್ಲಿ ಹಲವು ರೀತಿಯ ಪಲ್ಲಟಗಳಾಗಿರುವುದನ್ನು ಕಾಣಬಹುದಾಗಿದೆ. ಪರಿಶಿಷ್ಟ ಪಂಗಡಕ್ಕೆ ಸೇರಿದ ಹರಿಣ ಶಿಕಾರಿ ಸಮುದಾಯಕ್ಕೆ ಸರ್ಕಾರದಿಂದ ಬರುವ ಯಾವುದೇ ಯೋಜನೆಗಳು ನೇರವಾಗಿ ತಲುಪಲು ಸಾಧ್ಯಾವಾಗಿಲ್ಲ. ಇದರಿಂದ ಇವರ ಅಭಿವೃದ್ಧಿ ಕುಂಠಿತವಾಗಿವೆ. ಎಲ್ಲೋ ಒಂದು ಕಡೆ ಕೊಳಚೆ ಪ್ರದೇಶದಲ್ಲಿ ತಮ್ಮ ಮನೆಗಳನ್ನು ಕಟ್ಟಿಕೊಂಡು ಬದುಕುತ್ತಿದ್ದ ಈ ಹರಿಣ ಶಿಕಾರಿ ಜನಾಂಗ, ಇಂದಿಗೂ ಸಹ ಯಾವುದೇ ರೀತಿಯಲ್ಲಿಯೂ ಅಭಿವೃದ್ಧಿಯಾಗಿಲ್ಲ. ಹೀಗಾಗಿ ಸರ್ಕಾರದ ಯೋಜನೆಗಳಲ್ಲಿ ಈ ಸಮುದಾಯದ ಭಾಗಿತ್ವ ಕುರಿತು ಅಭ್ಯಸಿಸುವುದಾಗಿದೆ.

**ಅಧ್ಯಯನದ ವೈಧಾನಿಕತೆ**

ಹರಿಣ ಶಿಕಾರಿ ಜನಾಂಗವು ಶೈಕ್ಷಣಿಕವಾಗಿ, ಸಂಪೂರ್ಣವಾಗಿ ಹಿಂದುಳಿದಿರುವುದಾಗಿದೆ. ಹಾಗೆಯೇ ಈ ಜನಾಂಗದ ಮಹಿಳೆಯರು ಕೌಟುಂಬಿಕೆ, ಸಾಮಾಜಿಕ, ಸಂಪ್ರದಾಯಿಕ, ಆರ್ಥಿಕ ಮತ್ತು ಆರೋಗ್ಯದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇವೆಲ್ಲವುಗಳ ಬಗ್ಗೆ ಅಧ್ಯಯನ ಮಾಡುವ ಅಗತ್ಯವಿದೆ.

ಸಂಶೋಧನೆಯ ಅತ್ಯಂತ ಪ್ರಮುಖವಾದ ಘಟ್ಟವೇ ಮಾಹಿತಿ ಅಥವಾ ದತ್ತಾಂಶಗಳ ಸಂಗ್ರಹಣೆ. ಸಂಶೋಧನೆಗಾಗಿ ಆಯ್ಕೆ ಮಾಡಿಕೊಂಡಿರುವ ವಿಷಯದ ಬಗ್ಗೆ ವಿವಿಧ ಮೂಲಗಳಿಂದ ವಿಷಯವನ್ನು ಸಂಗ್ರಹಿಸಲಾಗಿದೆ.

ಸಂಶೋಧನೆಗೆ ಆಯ್ಕೆ ಮಾಡಿಕೊಂಡು ಕ್ಷೇತ್ರವನ್ನು ನೇರವಾಗಿ ಸಂಪರ್ಕಿಸಿ ಹರಿಣ ಶಿಕಾರಿ ಸಮುದಾಯದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಮಾಹಿತಿಗಳನ್ನು ಸಂಗ್ರಹಿಸಲಾಗುವುದು. ಇದಕ್ಕೆ ಪೂರಕವಾಗಿ ಅವಲೋಕನ, ಪ್ರಶ್ನಾವಳಿ, ಸಂದರ್ಶನ ವಿಧಾನಗಳನ್ನು ಬಳಸಿ ಸಮುದಾಯದ ಜನಜೀವನದೊಂದಿಗೆ ಭಾಗಿಯಾಗಿ ಅವರ ನಡೆ-ನುಡಿ, ಆಚಾರ-ವಿಚಾರ, ಆದರ್ಶಗಳು, ಮೌಲ್ಯಗಳು, ಭಾವನೆಗಳು, ದೃಷ್ಟಿಕೋನ ಎಲ್ಲದರ ಬಗ್ಗೆ ಸಂಪೂರ್ಣ ಮಾಹಿತಿ ಸಂಗ್ರಹಿಸಲಾಗುವುದು.

ಕ್ಷೇತ್ರಕಾರ್ಯದ ಜೊತೆಗೆ ಶಾಸನಗಳು ಅಧ್ಯಯನ ಕೃತಿಗಳನ್ನು ಅನುಲಕ್ಷಿಸಿ ಅಧ್ಯಯನ ಕೃತಿಗಳನ್ನು ಅನುಲಕ್ಷಿಸಿ ಅಧ್ಯಯನ ಮಾಡಲಾಗುವುದು.

ಅಧ್ಯಾಯ ಎರಡು

# ಐತಿಹಾಸಿಕ ಹಿನ್ನಲೆ

೨.೧ ಹರಿಣಶಿಕಾರಿ ಪದದ ನಿಷ್ಪತ್ತಿ

೨.೨ ಕ್ರಿಮಿನಲ್ ಟ್ರೈಬ್ ಆಕ್ಟ್

೨.೩ ವಸಾಹತುಗಳು

ಮಾನವ ಮೂಲತಃ ಬುಡಕಟ್ಟು ಜೀವಿ ಹೀಗಾಗಿ ಅರಣ್ಯಗಳಲ್ಲೆಯೇ ಅವನ ಬದುಕು ಸಾಗುತ್ತಿತ್ತು. ನಿಸರ್ಗದ ಮಡಿಲಲ್ಲಿ ದೊರೆಯುವ ಹಣ್ಣು ಹಂಪಲು, ಗಡ್ಡೆ, ಗೆಣಸನ್ನು ಹೆಕ್ಕಿ ತಂದು ಆಹಾರ ಸಂಗ್ರಹಣೆ ಮಾಡುತ್ತಿದ್ದರು. ಪ್ರಾಣಿಗಳನ್ನು ಬೇಟೆಯಾಡುವುದು, ಆತನ ಮುಖ್ಯ ಕಸಬಾಗಿತ್ತು. ಹೀಗೆ ಕಾಡು ಮತ್ತು ಮನುಷ್ಯನ ನಡುವೆ ಏರ್ಪಟ್ಟ ಸಂಬಂಧಗಳು ಮುಂದೆ ಕೆಲ ಕಾಲದ ನಂತರ ಅದು ನದಿಗಳ ದಡದಲ್ಲಿ ನಾಗರೀಕತೆಯ ರೂಪವನ್ನು ಪಡೆದುಕೊಂಡು ಬಂದಿರುವುದನ್ನು ನೋಡಬಹುದು. ಒಂದು ಕಡೆ ತಮ್ಮದೇ ಆದ ಜನ ಸಮೂಹದೊಂದಿಗೆ, ಬದುಕನ್ನು ಕಟ್ಟಿಕೊಂಡ ಇವರು ಪ್ರತ್ಯೇಕವಾದ ಸಾಂಸ್ಕೃತಿಕ ಆಚಾರವನ್ನು ರೂಢಿಸಿಕೊಂಡು ಬಂದರು, ಇಂಥಹ ಅನೇಕ ರೀತಿಯ ಬುಡಕಟ್ಟು ಸಮೂದಾಯಗಳನ್ನು ಭಾರತದಾದ್ಯಂತ ನೋಡಬಹುದು.

ಕ್ರಮೇಣ ಮಾನವ ಸಾಂಸ್ಥಿಕ ಜೀವನ ಕ್ರೀಯೆಗೆ ಒಳಗಾದ ಮೇಲೆ ಅಲ್ಲಿ ಸಮಾಜದ ಅನೇಕ ರೀತಿಯ ವೈಪರಿತ್ಯಗಳನ್ನು ಎದುರಿಸಬೇಕಾಯಿತು. ಅಂದಿನಿಂದ ಇಂದಿನವರೆಗೆ ವಿಶಿಷ್ಟ ರೀತಿಯ ಬದುಕನ್ನು ಕಟ್ಟಿಕೊಂಡು ಬಂದು ಹಲವು ಬುಡಕಟ್ಟು ಸಮುದಾಯಗಳು ವರ್ತಮಾನದಲ್ಲಿ ತುಂಬ ಶೋಚನೀಯವಾದ ರೀತಿಯಲ್ಲಿ ಬದುಕುತ್ತಿವೆ.

ಭಾರತದಲ್ಲಿ ಕಂಡು ಬರುವ ಬುಡಕಟ್ಟುಗಳು ಸಾಮಾನ್ಯವಾಗಿ ಪ್ರಾರಂಭದ ಜೀವನ ಆರಂಭಿಸಿದ್ದು ಅರಣ್ಯ ಪ್ರದೇಶಗಳಲ್ಲಿ ಕಾಲಗತಿಸಿದಂತೆ ನಾಡಿನ ಸಂಪರ್ಕ ಪಡೆದ ಈ ಸಮುದಾಯಗಳು ನಾಗರೀಕತೆಗೆ ಒಳಪಡಲಾರಂಭಿಸಿದರು. ಇವರಲ್ಲಿ ಕೆಲವರು ಸಮಾಜದ ಮುಖ್ಯ ವಾಹಿನಿಗೆ ಬಂದರೆ ಮತ್ತೆ ಕೆಲವರು ಅಲ್ಪ ಸ್ವಲ್ಪ ಬದಲಾಗಿ ಇನ್ನೂ ಕಡುಬಡತನದಲ್ಲಿಯೇ ಬದುಕುತ್ತಿದ್ದಾರೆ. ಆದರೆ ತಮ್ಮ ಮೂಲ ಪರಂಪರೆ, ಸಂಸ್ಕೃತಿಯನ್ನು ಕಾಪಾಡಿಕೊಂಡ ಬಂದಿದ್ದರೆ ಇನ್ನೂ ಕೆಲವು ಸಮುದಾಯಗಳು ಇಂದು ಜಾಗತೀಕರಣ, ನಗರೀಕರಣದ ಪ್ರಭಾವಕ್ಕೆ ಒಳಗಾಗಿ ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಮುಂತಾದ ಕ್ಷೇತ್ರಗಳು ಸ್ಥಿತ್ಯಂತರ ಪ್ರಕ್ರೀಯೆಗೆ ಒಳಗಾಗಿ ತಮ್ಮ ಮೂಲ ಸಂಪ್ರದಾಯದ ಪರಿಶುದ್ಧತೆಯ, ಮೌಲ್ಯಗಳನ್ನು ಕಾಪಾಡಿಕೊಂಡು ಮುಂದೆ ಸಾಗುವಲ್ಲಿ ವಿಫಲಗೊಂಡಿದೆ. ಹರಿಣ ಶಿಕಾರಿ ಸಮುದಾಯವು ಸಹ ಇಂತದೇ ಪ್ರಕ್ರೀಯೆಗೆ ಒಳಗಾಗಿದೆ. ಆದರೆ ಈ ಸಮುದಾಯವು ತುಂಬಾ ವಿಶಿಷ್ಠವಾದ ಸಾಂಸ್ಕೃತಿಕ ಹಿನ್ನಲೆಯನ್ನು ಒಳಗೊಂಡಿದೆ.

ಕರ್ನಾಟಕವು ಪ್ರಾಚೀನ ಕಾಲದಿಂದಲೂ ಹಲವು ಸಮುದಾಯಗಳಿಗೆ ತನ್ನದೇ ಆದ ಅಸ್ಥಿತ್ವವನ್ನು ನೀಡಿದೆ. ನಾಡಿನಲ್ಲಿ ಸುಮಾರು ೫೩ ಕ್ಕೂ ಹೆಚ್ಚು ಬುಡಕಟ್ಟು ಜನಾಂಗಗಳು ನೆಲೆ ನಿಂತಿದ್ದು, ಅವುಗಳೆಲ್ಲ

ತಮ್ಮದೇ ಆದ ವಿಶಿಷ್ಟ ರೀತಿಯ ರೂಢಿ ಸಂಪ್ರದಾಯಗಳನ್ನು ಒಳಗೊಂಡಿದೆ. ಪ್ರಸ್ತುತ ಇಪ್ಪತ್ತನೇಯ ಶತಮಾನದಲ್ಲೂ ಇನ್ನೂ ಹಲವು ಬುಡಕಟ್ಟು ಸಮುದಾಯಗಳಿಗೆ ನಾಗರಿಕತೆಯ ಸಂಪರ್ಕವೇ ಇಲ್ಲದಂತಾಗಿ ಕಾಡು ಮೇಡುಗಳಲ್ಲಿಯೇ ತಮ್ಮ ಬದುಕನ್ನು ಕಟ್ಟಿಕೊಂಡು ಬದುಕುತ್ತಿದ್ದಾರೆ. ಇನ್ನೂ ಕೆಲವರು ನಗರದ ಕೊಳಚೆ ಪ್ರದೇಶದಲ್ಲಿ ತಮ್ಮ ಗುಡಿಸಲುಗಳನ್ನು ನಿರ್ಮಿಸಿ ಜೀವನ ಸಾಗಿಸುವವರಿದ್ದಾರೆ. ಪ್ರತಿಯೊಂದು ಬುಡಕಟ್ಟು ಸಮುದಾಯಗಳಿಗೆ ತನ್ನದೇ ಆದ ಒಂದು ಐತಿಹಾಸಿಕ ಹಿನ್ನಲೆ ಇರುವಂತೆ 'ಹರಿಣ ಶಿಕಾರಿ' ಬುಡಕಟ್ಟಿಗೂ ಸಹ ತನ್ನದೇ ಆದ ಒಂದು ಚಾರಿತ್ರಿಕ ಹಿನ್ನಲೇ ಇದೆ. ಈ ಸಮೂದಾಯದ ಕುರಿತಾಗಿ ಅನೇಕ ದಂತಕತೆಗಳಿವೆ. ವದಂತಿಗಳಿವೆ, ಪುರಾಣ ಕಲ್ಪಿತ ಕಥೆಗಳು ಸಹ ಹುಟ್ಟಿಕೊಂಡಿದೆ. ಆದರೆ ಇವರ ಚಾರಿತ್ರಿಕ ಹಿನ್ನಲೆ ಕುರಿತಾಗಿ ಲಿಖಿತ ಆಧಾರಗಳು ದೊರೆಯಲಾರದು. ಜನರು ಹೇಳುವ ಮೌಖಿಕ ಅಂಶಗಳ ಹಿನ್ನಲೆಯಲ್ಲಿ ಇವರ ಮೂಲವನ್ನು ಗುರುತಿಸಲು ಸಾಧ್ಯತೆಯಿದೆ. ಲಂಬಾಣಿಗರಂತೆ ಈ ಹರಣಿ ಶಿಕಾರಿ ಸಮುದಾಯವು ಸಹ ಧೈರ್ಯವಂತಿಕೆಯಲ್ಲಿ ತುಂಬ ಪ್ರಬಲರಾಗಿದ್ದರಂತೆ ಹೀಗಾಗಿ ಇವರು ಸಹ ರಾಣಾ ಪ್ರತಾಪ ಸಿಂಹ, ಪೃಥ್ವಿರಾಜ ಚೌವ್ಹಾಣ ಹೀಗೆ ಮುಂತಾದ ಅರಸರ ಅಶ್ರಯದಲ್ಲಿ ಸೈನಿಕರಾಗಿ ಅವರಿಗೆ ಸಹಾಯಕರಾಗಿ ಸೇವೆ ಸಲ್ಲಿಸಿದ್ದಾರೆ. ಕೆಲ ಕಾಲದ ನಂತರ ಆಶ್ರಯ ನೀಡಿದ ಅರಸ ಇತರೆ ರಾಜರುಗಳಿಂದ ಸೋತು ಮರಣವನ್ನಪ್ಪಿದ ಮೇಲೆ ಈ ಸಮುದಾಯಗಳು ಆಶ್ರಯದಾತರಿಲ್ಲದೆ ಸಹಜವಾಗಿ ಬೇರೆ ಬೇರೆ ಕಡೆಗೆ ಚದುರಿ ಹೋದರು. ಮತ್ತೆ ಕೆಲವರು ಮೊಗಲರಿಗೆ ಸೈನಿಕರಾಗಿ ಸೇವೆಸಲ್ಲಿಸಿದವರಿದ್ದಾರೆ. ಹೀಗೆ ಈ ಹರಿಣ ಶಿಕಾರಿ ಸಮುದಾಯ ಅಲೆಮಾರಿಗಳಾಗಿ ಅಲ್ಲಲ್ಲಿ ಸಂಚರಿಸುತ್ತಾ ಕೆಲವರು ಅಡವಿ ಸೇರಿದರೆ ಮತ್ತೆ ಕೆಲವರು ಊರು ಸೇರಿದರು.

ಯಾವುದೇ ರೀತಿಯ ಆದಾಯವಿಲ್ಲದ ಈ ಸಮುದಾಯ ಕಳ್ಳತನ ದರೋಡೆ ಮಾಡಲಿಕ್ಕೆ ಇಳಿಯಿತು. ಇದೊಂದೆ ಅಲ್ಲ ಸುಮಾರು ಬುಡಕಟ್ಟುಗಳು ಈ ಮೇಲಿನ ಕಸುಬನ್ನು ಆಯ್ಕೆ ಮಾಡಿಕೊಂಡು ತಮ್ಮ ಬದುಕನ್ನು ಸಾಗಿಸುತ್ತಿದ್ದವು. ಇಂದಿಗೂ ಸಹ ಈ ಬುಡಕಟ್ಟುಗಳನ್ನು ಕಂಡು ಭಯ ಪಡವರಿದ್ದಾರೆ. ಆದರೆ ಕಾಲಕಳೆದಂತೆ ಹರಿಣ ಶಿಕಾರಿ ಬುಡಕಟ್ಟುಗಳು ಕಾಡನ್ನು ಬಿಟ್ಟು ನಾಡು ಸೇರಿದವು. ಊರಿನ ಹೊರಗೆ ಅಲ್ಲಲ್ಲಿ ಚಿಕ್ಕ ಚಿಕ್ಕ ಗುಡಿಸಲು ನಿರ್ಮಿಸಿ ತಾತ್ಕಾಲಿಕವಾಗಿ ವಾಸಿಸುವರು. ಏಕೆಂದರೆ ಇಂದಿಗೂ ಇವರಿಗೆ ಅಲೆಮಾರಿತನದ ಬದುಕು ಬಿಟ್ಟಿಲ್ಲ. ಆದರೆ ಕೆಲವು ಕಡೆ ಇವರಲ್ಲಿ ಕೆಲವರು ಸ್ಥಿರವಾದ ನೆಲೆವೂರಿದವರಿದ್ದಾರೆ. ಗುಜರಾತ, ಮಹಾರಾಷ್ಟ್ರ, ರಾಜಸ್ಥಾನ, ಕರ್ನಾಟಕ, ಆಂಧ್ರಪ್ರದೇಶಗಳಲ್ಲಿ ಕಂಡುಬರುವ ಇವರು ಅಲ್ಲಲ್ಲಿ ಹಂಚಿ ಹರಡಿ ಹೋಗಿದ್ದಾರೆ. ಸಾಂಪ್ರದಾಯಿಕವಾಗಿ ಬದುಕುತ್ತಿದ್ದ ಇವರಲ್ಲಿ ಕೆಲವರು ತಮ್ಮ ಮೂಲ ಪ್ರವೃತ್ತಿಯನ್ನು ಈಗಲೂ ಸಹ ಬಿಟ್ಟಿಲ್ಲ. ಅತ್ಯಂತ ಚಿಕ್ಕ ಸಮುದಾಯವಾದ ಇದು ರಾಜಕೀಯವಾಗಿ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ತುಂಬ ಹಿಂದುಳಿದಿದೆ. ಕರ್ನಾಟಕದ ಕೆಲವೇ ಜಿಲ್ಲೆಗಳಲ್ಲಿ ಕಂಡು ಬರುವ ಇವರ ಬದುಕು ತುಂಬಾ ಶೋಚನೀಯವಾಗಿದೆ. ಯಾವುದೇ ರೀತಿಯಲ್ಲಿ ಆಧಾರವಿಲ್ಲದ ಇವರು ಕೂಲಿ ಮಾಡಿ ಮಕ್ಕಳನ್ನು ಸಾಕಬೇಕಾಗಿದೆ. ಹೀಗಾಗಿ ಈ ಸಮುದಾಯದ ಪಾರಂಪರಿಕತೆಯ ಬಗೆಗೆ ದೊರೆತ ಆಧಾರಗಳ ಹಿನ್ನಲೆಯಲ್ಲಿ ಈ ಅಧ್ಯಾಯದಲ್ಲಿ ನಿರೂಪಿಸಲು ಪ್ರಯತ್ನಿಸಿದ್ದೇನೆ.

"ಹರಿಣ ಶಿಕಾರಿ ಸಮುದಾಯದವರು 'ಖಾಂಜ' ಎಂಬುವನನ್ನು ತನ್ನ ಮೂಲ ಪುರುಷ ಎಂದು ನಂಬಿಕೊಂಡಿದ್ದಾರೆ. ಇವನ ಮಕ್ಕಳು ಬೇರೆ ಬೇರೆ ಸಮಾಜಗಳಿಗೆ ಸೇರಿದ ಹೆಂಗಸರನ್ನು ಮದುವೆಯಾದರು. ಇವರುಗಳಿಗೆ ಹುಟ್ಟಿದ ಮಕ್ಕಳೇ ಹರಿಣ ಶಿಕಾರಿ ಎಂದು ಹೇಳಲಾಗುತ್ತದೆ"[6]

ಕ್ಯಾಪ್ಟನ್ ನ್ಯೂ ಬೋಲ್ಟ್ ಪ್ರಕಾರ ಚೆಂಚರ ಮೂಲ ಕೃಷ್ಣಾವತಾರಕ್ಕೂ ಹಿಂದೆ ಹೋಗುತ್ತದೆ. ಈ ದಂತಕಥೆಯ ಪ್ರಕಾರ ಚೆಂಚವಾರರು ಯರಗೊಲ್ಲ ಮತದ ಕುರಬ ರಾಣಿ ಕುರಿಗಳನ್ನು ಕಾಯುವ ಕೆಲಸ ಮಾಡುತಿದ್ದರು. ಓಬಳೇಶ್ವರಸ್ವಾಮಿ ನೆಲೆಸಿರುವ ನಲ್ಲಾಮಲೈ ಬೆಟ್ಟಗಳಲ್ಲಿ, ಯರಗೊಲ್ಲ, ಕನ್ಯೆ ಚಂಚಿತಾಳನ್ನು ಅಪಹರಿಸಿಕೊಂಡು ಹೋಗಿಬಿಟ್ಟನಂತೆ, ಹೀಗಾಗಿ ಓಬಳೇಶ್ವರ ಸ್ವಾಮಿ ಮತ್ತು ಚಂಚಿತಾ ಇವರುಗಳಿಗೆ ಹುಟ್ಟಿದ ಮಕ್ಕಳು ಮುಂದೇ ಚೆಂಚರೆಂದು"[7] ಕರೆಸಿಕೊಂಡರೆಂದು ಹೇಳುವುದುಂಟು.

ಈ ಹರಿಣ ಶಿಕಾರಿಗಳು ರಾಣಾ ಶಿವಾಜಿ ಮಹಾರಾಜರೇ ನಮ್ಮ ಗುರುಗಳು ಎನ್ನುತ್ತ ಅವರು ಚಾಮುಂಡೇಶ್ವರಿಯನ್ನು ಚೆನ್ನಾಗಿ ಪೂಜಿಸಿ ಭಕ್ತರಾಗಿ ಕುಲದೇವತೆಯನ್ನಾಗಿ ಮಾಡಿಕೊಳ್ಳುತ್ತಿದ್ದರು. ಅಕ್ಬರ ಮತ್ತು ರಾಣಾಪ್ರತಾಪಸಿಂಗ್‌ರ ಜಗಳದಿಂದಾಗಿ ನಾವು ಈ ಕಡೆ ಕರ್ನಾಟಕಕ್ಕೆ ಬರಬೇಕಾಯಿತು ಎಂದು ಹೇಳುತ್ತಾರೆ. ಅಕ್ಬರ ದೇಶವನ್ನೆಲ್ಲಾ ತನ್ನದನ್ನಾಗಿ ಮಾಡಿಕೊಳ್ಳಬೇಕೆಂದುಕೊಂಡು ರಾಣಾ ಪ್ರತಾಪನ ನಗರಕ್ಕೆ ಬಂದು ಡೇರೆ ಹಾಕಿದ್ದ. ಆಗ ರಾಣಾ ಹೋಗಿ 'ಅಮ್ಮ ಅಮ್ಮ ಚಾಮುಂಡೇಶ್ವರಿ ಅಕ್ಬರಿ ಬಂದಿದ್ದಾನೆ' ಅಂತ ಕೇಳಿಕೊಂಡ ಆಗ ಅಮ್ಮ ಒಂದು ಹುಣಸೆ ಮಾವಿನ ಬೀಜಗಳೆರಡನ್ನೂ ಕೊಟ್ಟಳು 'ಇವನ್ನು ಹಾಕಿ ಬೆಳೆಸು ಇವು ದೊಡ್ಡವಾದರೂ ನಿನ್ನನ್ನು ಅಕ್ಬರ್ ಗೆಲ್ಲಲಾಗುವುದಿಲ್ಲ' ಎಂದು ಆಶೀರ್ವದಿಸಿದಳು. ಅದೇ ರೀತಿ ಬೀಜ ಹಾಕಿ ಬೆಳೆಸಲು ಅಕ್ಬರ ಅಲ್ಲಿಂದ ತನ್ನ ಡೇರೆಗಳನ್ನು ಕೀಳಲಿಕ್ಕೆ ಶುರುಮಾಡಿದ ರಾಣಾನಿಗೆ ಅಮ್ಮ ಇನ್ನೂ ಒಂದು ಮಾತು ಹೇಳಿದಳು. 'ಈ ಬಂಗಾರದ ಕುದುರೆ ಹತ್ತು ಇದು ಒಂದು ಹೊಡೆತಕ್ಕೆ ದೇವಕೊಂಡಕ್ಕೆ ಹೋಗುತ್ತೆ. ಇದು ಇನ್ನೊಂದು ಹೊಡೆತಕ್ಕೆ ಸುರಿಸಕೊಂಡಕ್ಕೆ ಹೋಗುತ್ತೆ ಎಂದು ಹೇಳಿ ಕೊಟ್ಟಿತು. ಈ ಕುದುರೆಯನ್ನೇರಿದ ರಾಣಾ ಒಂದು ಹೊಡೆತಕ್ಕೆ ದೇವಕೊಂಡಕ್ಕೆ ಬಂದ ಅಲ್ಲಿ ಸ್ನಾನ ಮಾಡಿದ ಆ ಮೇಲೆ ಆ ನೀರು ಹುಳು ಆಯಿತು. ಇನ್ನೊಂದು ಹೊಡೆತಕ್ಕೆ ಸುರಿಸಕೊಂಡಕ್ಕೆ ಹೋದ ಅಲ್ಲಿ ಬಾಯಿ ತೊಳೆದ ಆಗ ದೇವಿ ಮತ್ತೆ ಪ್ರತ್ಯಕ್ಷ ಆಗಿ 'ಈಗ ಒಂದು ಕತ್ತಿ ಕೊಡ್ತೀನಿ ಈ ಕತ್ತಿಗೆ ಅಕ್ಬರನೇ ಸಿಕ್ತಾನೊ, ಅವನ ಮಗನೇ ಸಿಕ್ತಾನೋ ಗೊತ್ತಿಲ್ಲ' ಅಂತೇಳಿ ಕತ್ತಿ ಕೊಟ್ಟು ಮಾಯವಾಗಿ ಬಿಟ್ಟಿತು. ಆ ಮೇಲೆ ಜಗಳ ಆಯಿತು. ಅಕ್ಬರ ಸಿಗಲಿಲ್ಲ. ಅವನ ಮಗ ಸಿಕ್ಕಿಬಿಟ್ಟ ರಕ್ತ ನೀರುಕೋಡಿ ರೀತಿ ಹರಿತು. ಅಮ್ಮ ಮುಂಚೆನೆ ಹೇಳಿತ್ತು ಮೊದಲು ರಕ್ತನ ನನಗೆ ತಗೋ ಅಮ್ಮ ಅಂತ ಕತ್ತಿಯಿಂದ ಕಾಣಿಸಬೇಕು ಅಂತ. ಈ ಜಗಳದಲ್ಲಿ ರಾಣಾ ಅಮ್ಮನಿಗೆ ರಕ್ತ ತೋರಿಸೋದನ್ನೇ ಮರೆತುಬಿಟ್ಟು ಬದಲಿಗೆ ರಕ್ತ ತೆಗೆದು ತನ್ನ ಹಣೆಗೆ ಇಟ್ಟುಕೊಂಡ ದೇವಿ ಅವನಿಗೆ ಶಾಪಕೊಟ್ಟಿತು. 'ನಿನ್ನ ಕತ್ತಿ ನಿನಗೆ ತಿರುಗಲಿ' ಎಂದು ಪ್ರತಾಪ ಸತ್ತ ಅವನ ಹೆಂಡತಿ ಬಂದು ನೋಡಿದಳು. ತನ್ನ ಗಂಡ ಕಾಣಲಿಲ್ಲ. ಆಗ ಅಮ್ಮನಿಗೆ 'ನನ್ನ ಗಂಡನ ತಲೆ ತೋರಿಸಿಬಿಟ್ಟರೆ ನಾನು ಸತಿ ಆಗ್ತೀನಿ ಅಂತ ಬೇಡಿಕೊಂಡಳು, ಆಗ ಮುಂಡ ಎದ್ದು ನಿಂತುಬಿಟ್ಟಿತು. ಹತ್ತು ನಿಮಿಷ ಆದ

ಮೇಲೆ ಕೆಳಗೆ ಬಿದ್ದಿತು. ರಾಣಿ ತನ್ನ ಮಗನಿಗೆ 'ಮಗನೆ ನಿನ್ನ ಅಪ್ಪನ ಜೊತೆ ನಾನು ಸತಿ ಆಗ್ತೀನಿ' ಎಂದು ಸೌದೆ ಇಟ್ಟುಕೊಂಡ, ಸತ್ತು ಹೋದಳು, ಆಗ ಉಳಿದ ಸಣ್ಣ ಮಕ್ಕಳಾದ ನಾವು ಗತಿಯಿಲ್ಲದೆ ಅಲ್ಲಿ ಇಲ್ಲಿ ಬೇಡೋದು, ತಿನ್ನೋದು, ಬೇಟೆ ಆಡೋದು ಮಾಡುತ್ತಾ ಊರೂರು ಸುತ್ತುತ್ತ ಕರ್ನಾಟಕಕ್ಕೆ ಬಂದೆವು"[೩] ಎಂದು ತಮ್ಮ ಜನಾಂಗದ ಐತಿಹಾಸಿಕತೆಯ ಬಗ್ಗೆ ಹಕ್ಕಿಪಿಕ್ಕಿಯರು ಹೇಳುತ್ತಾರೆ.

ರಾಜಸ್ಥಾನದ ಚಿತ್ತೊಡದ ಮೇವಾಡದಲ್ಲಿದ್ದಂತ ನಮ್ಮ ಪೂರ್ವಿಕರು ಮಹಾರಾಣಾ ಪ್ರತಾಪನ ಅಂಗರಕ್ಷಕರಾಗಿದ್ದರು. ಪಾರ್ದಿ ಎಂದರೆ ಅಂಗರಕ್ಷಕ ಎಂದರ್ಥ. ಕೆಲವೊಂದು ಮುಸ್ಲಿಂ ರಾಜರು ಮಹಾರಾಣಾ ಪ್ರತಾಪನ ಮೇಲೆ ರಾಜ್ಯಕ್ಕಾಗಿ ದಾಳಿ ಮಾಡಿದಾಗ ಪಾರ್ದಿಗಳೇ ಮಹಾರಾಜ ಪ್ರತಾಪನ ಅಂಗ ರಕ್ಷಕರಾಗಿ ಕೆಲಸ ಮಾಡಿದ್ದರು.

ಬಾಬರನು ಮಹಾರಾಣಾ ಪ್ರತಾಪನನ್ನು ಕೊಲ್ಲಲು ೧೫ ಸಲ ಅವನ ಮೇಲೆ ದಂಡೆತ್ತಿ ಬಂದಾಗಲೆಲ್ಲಾ ಪಾರ್ದಿಯರೇ ಅವನಿಗೆ ಅಂಗರಕ್ಷಕರಾಗಿದ್ದರು. ಆದರೆ ಬಾಬರನು ತನ್ನ ೧೬ನೇ ಪ್ರಯತ್ನದಲ್ಲಿ ರಾಣಾ ಪ್ರತಾಪನನ್ನು ಕೊಂದುಬಿಟ್ಟ ಅದಕ್ಕೂ ಮುಂಚೆ ಅಕ್ಬರ್ ಬಾದ್ ಷಾಹನು ರಾಣಾ ಪ್ರತಾಪನನ್ನು ಸೋಲಿಸಿದಾಗ ರಾಣಾ ಪ್ರತಾಪರು ಅಡವಿ ಅಡವಿ ಅಲೆಯುತ್ತಿದ್ದರು. ನಮ್ಮ ಕಷ್ಟವನ್ನು ನೋಡಿ ಸಹಿಸದ ರಾಣಾ ಪ್ರತಾಪನು ಮುಸ್ಲಿಂ 'ಮೊಘಲ್ ರಾಜ್ಯವನ್ನು ಲೂಟಿಮಾಡಿ ಊಟ ಮಾಡಿ' ಎಂದು ಆದೇಶಿಸಿದ್ದ.

ನಂತರದಲ್ಲಿ ಗ್ವಾಲಿಯಾರದ ರಾಣಿ ಝಾನ್ಸಿ ಲಕ್ಷ್ಮೀ ಬಾಯಿಯು ನಮ್ಮನೇ ಪಾರ್ದಿಯನ್ನೇ ಅಂಗರಕ್ಷಕರನ್ನಾಗಿ ಇಟ್ಟುಕೊಂಡಳು. ಅವಳು ನಮ್ಮ ಜನರಿಗೆ ತಾಮ್ರದ ಹಕ್ಕು ಪತ್ರಗಳನ್ನು ಕೊಟ್ಟಿದಳು. ಅವಳ ಅಂತಿಮ ದಿನಗಳಲ್ಲಿ ನಮ್ಮ (ಪಾರ್ದಿಯರ) ಉಳಿವಿಗಾಗಿ ನೀವು ಕೋಲ್ಹಾಪುರದ ಶಾಹು ಮಹಾರಾಜರ ಕಡೆಗೆ ಹೋಗಿರಿ ಎಂದು ತಾಮ್ರದ ಪತ್ರಗಳನ್ನು ಕೊಟ್ಟಿದಳು. ಆಗ ಶಾಹು ಮಹಾರಾಜ ನಮ್ಮ ಜನರಿಗೆ ತುಂಬಾ ಸಹಾಯ ಮಾಡಿದ್ದರು. ನಂತರದಲ್ಲಿ ನಮ್ಮ ಜನ ತಮ್ಮ ಹೊಟ್ಟೆ ಪಾಡಿಗಾಗಿ ಭಾರತದ ಎಲ್ಲಾ ರಾಜ್ಯಗಳಲ್ಲಿ ಹರಡಿಕೊಂಡಿವೆ"[೪] ಎಂದು ಹೇಳುತ್ತಾರೆ.

'ಹಕ್ಕಿಪಿಕ್ಕಿಯರು' ನಮ್ಮ ತಂದೆ ದಾದಾಪೀರ್‌ನಿಗೆ ೫ ಜನ ಮಕ್ಕಳು ಲಂಬಾಣಿ ನಾವು ಜೋಗೆರು, ಬೈಲಕಮ್ಮಾರರು ಮತ್ತು ಮಾರವಾಡಿಗಳು. ನಮ್ಮ ಅಸ್ತಿಯನ್ನೆಲ್ಲ ಮಾರವಾಡಿಗಳು ಕಿತ್ತುಕೊಂಡು ಬಿಟ್ಟು ಶ್ರೀಮಂತರಾದರು ನಾವು ನಾಲ್ವರು ಭಿಕಾರಿಗಳಾಗಿ ಬಿಟ್ಟೆವು ಎಂದು ಹೇಳುತ್ತಾರೆ."[೫]

'ಹರಣ ಶಿಕಾರಿ' ಸಮೂದಾಯವು ಸುಮಾರು ಸಾವಿರ ವರ್ಷಗಳ ಹಳೆಯ ಇತಿಹಾಸವನ್ನು ಹೊಂದಿದೆ. "ಇವರ ಮೂಲ ರಾಜಸ್ಥಾನ, ಇವರು ಭಾರತದ ವಾಯುವ್ಯ ಭಾಗದಲ್ಲಿ ನೆಲೆಸಿದ್ದರು, ಇವರು ಪೃಥ್ವಿರಾಜ ಚವ್ಹಾಣನ ಅಂಗರಕ್ಷಕರಾಗಿದ್ದರು ಮತ್ತು ಮೇವಾಡದ ಅರಸರನ್ನು ಗೆದ್ದು ಆ ಪ್ರದೇಶವನ್ನು ಸಹ ತಮ್ಮ ವಶಕ್ಕೆ ಪಡೆದುಕೊಂಡರು, ಮೊಗಲರ ಆಳ್ವಿಕೆಯಲ್ಲಿ ರಾಣಾ ಪ್ರತಾಪನ ಸೋಲುಂಟಾಯಿತು. ಆಗ ಅಂಗರಕ್ಷಕರಾಗಿ ಕಾರ್ಯನಿರ್ವಹಿಸುತ್ತಿರುವ ಪಾರ್ದಿಯರು ಯಾವುದೇ ನೆಲೆಯಿಲ್ಲದೇ ಅತಂತ್ರ ಸ್ಥಿತಿಗೆ ತಲುಪುವಂತಾಯಿತು. ಪಾರ್ದಿಯರು ತಮ್ಮ ಜೀವನದ ಉಳಿವಿಗಾಗಿ, ಬದುಕಿನ ನಿರ್ವಹಣೆಗಾಗಿ

ಬೇರೆ ಬೇರೆ ವೃತ್ತಿಯನ್ನು ಅರಸುತ್ತಾ, ವಿವಿಧ ಪ್ರದೇಶಗಳಲ್ಲಿ ಹಂಚಿಕೊಂಡು ಹೋದರು, ಹೀಗೆ ಅಲೆಯುತ್ತಿದ್ದ ಈ ಸಮೂದಾಯವು ಕಾಡಿನ ಉತ್ಪನ್ನಗಳನ್ನೇ ತಮ್ಮ ಜೀವನದ ಮೂಲ ಪರಿಕರವನ್ನಾಗಿ ಬಳಸಿಕೊಳ್ಳಲು ಪ್ರಾರಂಭಿಸಿದರು. ಬೆಟ್ಟ-ಕಾಡು-ಮೇಡುಗಳಲ್ಲಿ ಅಲೆಯುತ್ತಿದ್ದ ಈ ಸಮೂದಾಯವು ಬೇಟೆಯಾಡುವುದನ್ನು ಒಂದು ಮುಖ್ಯ ಕಸಬನ್ನಾಗಿ ಮಾಡಿಕೊಂಡಿತು.

ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಅಲೆಯುತ್ತಿದ್ದ ಈ ಸಮೂದಾಯವು ಬೇಟೆ ಸಿಗದೇ ಇರುವಂತ ಸ್ಥಿತಿಯಲ್ಲಿ ಯಾವುದೇ ಕಸಬು ಇಲ್ಲದಂತೆ ಸ್ಥಿತಿಯಲ್ಲಿ ತಮ್ಮ ಹೊಟ್ಟೆ ಪಾಡಿಗಾಗಿ ಸಣ್ಣ ಪುಟ್ಟ ಕಳ್ಳತನ ಮಾಡಲು ಪ್ರಾರಂಭಿಸಿದರು. ಗ್ರಾಮದ ಹೊರಗಡೆ ತಮ್ಮ ವಾಸ್ತವ್ಯವನ್ನು ಹೂಡಿದ್ದು, ರಾತ್ರಿಯ ಸಮಯದಲ್ಲಿ ರೈತರ ಹೊಲದಲ್ಲಿ ಫಸಲಿಗೆ ಬಂದ ಬೆಳೆಯನ್ನು ಕಟಾವು ಮಾಡಿ ಕಳ್ಳತನದಿಂದ ತರುತ್ತಿದ್ದರು."[೬]

ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕೆಲವರು ನೀಡಿದ ಮಾಹಿತಿ ಪ್ರಕಾರ ಅವರು ತಮ್ಮ ಮೂಲ ಕಸಬು ಬೇಟೆಯಾಡುವುದು ಮತ್ತು ಕಳ್ಳತನ ಮಾಡುವುದು ಎಂದು ಹೇಳಿದ್ದಾರೆ. ಸುದ್ದಾ ಪಟ್ಟಿರವರ ಪ್ರಕಾರ, ನೂರು ವರ್ಷಗಳ ಹಿಂದೆ ಅವರು ಕಾಡುಗಳಲ್ಲಿ ವಾಸವಾಗಿದ್ದರು, ಕಳ್ಳತನವನ್ನು ಮಾಡಲು ರಾತ್ರಿ ಸಮಯದಲ್ಲಿ ಹಳ್ಳಿಗಳಿಗೆ ನುಗ್ಗುತ್ತಿದ್ದರು. ಆದ್ದರಿಂದ ಅವರನ್ನು ಜನರು ಕಳ್ಳರೆಂದು ಗುರುತಿಸಿದರು ಎಂದು ಹೇಳುತ್ತಾರೆ."[೭] ಕಾಡುಗಳಲ್ಲಿ ನೆಲೆಸಿದ್ದ ಅನೇಕ ಆದಿವಾಸಿ ಸಮುದಾಯ ಮುಖ್ಯವಾಗಿ ಕಾಡಿನ ಉತ್ಪನ್ನ ಮತ್ತು ಕುಲಕಸಬಾಗಿ ಅನೇಕ ಗುಡಿಕೈಗಾರಿಕೆಗಳನ್ನು ಅವಲಂಬಿಸಿದರು. ಕ್ರಮೇಣ ಕೈಗಾರೀಕರಣ, ಆಧುನಿಕರಣದ ಪ್ರಭಾವದಿಂದ ಅವರು ತಮ್ಮ ಮೂಲ ಕಸುಬನ್ನು ಕಳೆದುಕೊಂಡರು. ಅಲ್ಲದೇ ಕಾಡಿನಲ್ಲಿ ಸ್ವಚ್ಛಂದ ಹಕ್ಕಿಯಂತೆ ಬಾಳುತ್ತಿದ್ದ ಈ ಸಮೂದಾಯಗಳು ಅರಣ್ಯ ಸಂರಕ್ಷಣೆ ಕಾಯ್ದೆಯ ಅಧಿನಿಯಮದ ನಿಯಮಗಳಿಂದ ಅನೇಕ ಹಕ್ಕುಗಳಿಂದ ವಂಚಿತರನ್ನಾಗಿ ಮಾಡಿತು. ಈ ರೀತಿ ಒಂದಲ್ಲಾ ಒಂದು ಕಾರಣದಿಂದಾಗಿ ಅವರು ತಮ್ಮ ಬದುಕಿನ ನಿರ್ವಹಣೆಗಾಗಿ ಕಳ್ಳತನ ಮಾಡಲು ಪ್ರಾರಂಭಿಸಿದರು.

ಭಾರತದಲ್ಲಿ ರಾಜಷಾಹಿಗಳ ಆಳ್ವಿಕೆಯ ಕಾಲದಿಂದ ವಸಾಹಾತುಶಾಹಿ ಘಟ್ಟದವರೆಗೆ ಕ್ರಮೇಣ ಬೇರೆ ಬೇರೆ ಕಾರಣದಿಂದಾಗಿ ಸಾಮಾಜಿಕ ಪರಿಸ್ಥಿತಿಯಲ್ಲಿ ಬದಲಾವಣೆಗಳುಂಟಾದವು ಈ ಕಾಲಘಟ್ಟವು ಪ್ರಮುಖವಾದ ಐತಿಹಾಸಿಕ ಘಟನೆಗಳನ್ನು ಹೊಂದಿರುವುದು. "೧೭೭೪ ಮತ್ತು ೧೮೭೧ರ ನಡುವಿನ ಭಾರತದ ಇತಿಹಾಸ ಅತ್ಯಂತ ರಕ್ತಪಾತದಿಂದ ಕೂಡಿದ ಇತಿಹಾಸವಾಗಿದೆ. ಭಾರತದ ಸ್ಥಳೀಯ ರಾಜ್ಯಗಳ ವಿರುದ್ಧ ಈ ಅವಧಿಯಲ್ಲಿ ಕಂಪನಿ ಆಡಳಿತವು ಅತ್ಯಂತ ಕ್ರೂರ ಯುದ್ಧಗಳನ್ನು ಮಾಡಿತು. ಆಂಗ್ಲೋ ಮರಾಠಿಯುದ್ಧ, ಮೈಸೂರು ಯುದ್ಧ, ಹೋಳ್ಕರ ಶರಣಾಗತಿ, ಪೇಸ್ವೆಗಳ ಸೋಲು, ವೆಲ್ಲೂರಿನ ಸಿಪಾಯಿದಂಗೆ, ಮೈಸೂರು ಮತ್ತು ಕೂರ್ಗ್‌ಗಳನ್ನು ವಶಪಡಿಸಿಕೊಂಡದ್ದು, ಸಿಂದ್, ಸಿಖ್, ಜಾದ್ವ ಪ್ರದೇಶಗಳನ್ನು ಯುದ್ಧಗಳ ಮೂಲಕ ವಶಪಡಿಸಿಕೊಂಡಿದ್ದು ಮತ್ತು ೧೮೫೭ರಲ್ಲಿ ನಡೆದ ಸಿಪಾಯಿ ದಂಗೆಗಳು ಹಲವು ಸ್ಥಳೀಯ ಸಮುದಾಯಗಳನ್ನು ನೆಲೆ ಇಲ್ಲದಂತೆ ಮಾಡಿದವು. ಈ ಸಮೂದಾಯಗಳೇ ಮುಂದೆ ಅಲೆಮಾರಿಗಳಾಗಿ ಪರಿವರ್ತಿತವಾದವು."[೮]

ಹೀಗೆ ಅಲೆಮಾರಿ ಜೀವನವನ್ನು ಸಾಗಿಸುತ್ತಿದ್ದ ಇಂಥಹ ಸಮುದಾಯಗಳು ಮುಂದೆ ತಮ್ಮ ಬದುಕಿನ ಭದ್ರತೆಗಾಗಿ ಅನೇಕ ಗುಡಿಕೈಗಾರಿಕೆಯಂತಹ ಕೆಲಸ, ಬೇಟೆಗಾರಿಕೆ, ಪಾಶುಪಾಲನೆ ಮತ್ತು ಕೃಷಿ ಮುಂತಾದ ಕೆಲಸದಲ್ಲಿ ತೊಡಗಿಕೊಂಡರು. ಇದು ಅವರ ಆರ್ಥಿಕ ಮೂಲದ ಮುಖ್ಯ ಪರಿಕರಗಳಾಗಿದ್ದವು.

"ಹದಿನೆಂಟನೇ ಶತಮಾನದ ಕೊನೆಯ ಹೊತ್ತಿಗೆ ವಸಾಹಾತುಶಾಹಿ ತಂದ 'ಖಾಯಂ ಜಮೀನ್ದಾರಿ' ಕಾನೂನು ಸ್ಪಷ್ಟವಾಗಿ, ಕೆಳಜಾತಿ ಮತ್ತು ಆದಿವಾಸಿ ಸಮೂದಾಯಗಳಿಗಿದ್ದ ಭೂಮಿಯ ಜೊತೆಗಿನ ಪಾರಂಪರಿಕ ಅವಲಂಬನ್ನೆಯನ್ನ ಕತ್ತರಿಸಿತು. ವಸಾಹತುಶಾಹಿ ಮೂಲತಃ ಬಂಡವಾಳವಾದಿ ಆಶಯಗಳಿಂದಲೇ, ವಸಾಹತುಗಳನ್ನು ನಿರ್ಮಿಸಿಕೊಳ್ಳುತ್ತಿದ್ದ ಕಾರಣ ಅದು ರೂಪಿಸುತ್ತಿದ್ದ ಕಾನೂನುಗಳನ್ನೂ ಈ ಆಶಯಗಳ ದಟ್ಟ ವಾಸನೆ ಹರಡುತಿತ್ತು. ಉತ್ಪಾದನೆಯಿಂದ ಬರುವ ಲಾಭಕ್ಕೂ, ಉತ್ಪಾದಿಸಲು ವ್ಯಯವಾಗುವ ಶ್ರಮಕ್ಕೂ ಮಧ್ಯೆ ಈ ಬಂಡವಾಳವಾದ, ಒಂದು ನೀರವ ಅಪರಿಚಿತವಾತಾವರಣವನ್ನು ಸೃಷ್ಟಿಸುತ್ತದೆ. ದುಡಿಮೆ ಮಾತ್ರ ನಿನ್ನ ಕೆಲಸ ಫಲಾಫಲಗಳನ್ನು ನಿರೀಕ್ಷಿಸಬೇಡ ಎಂಬ ಸ್ಥಳೀಯ ಅವಕಾಶವಾದಿ, ಸಮುದಾಯಗಳ ಪುರಾಣ, ಶಾಸ್ತ್ರಗಳೂ ಸಹ, ಈ ಬಂಡವಾಳವಾದಕ್ಕೆ ಪೂರಕವಾಗಿದ್ದವು" ಕಂಪನಿ ಆಡಳಿತದ ಈ ರೀತಿಯ ವರ್ತನೆಗಳಿಂದ ಬೇಸತ್ತ ಅನೇಕ ಸಮುದಾಯಗಳು ಅದರ ವಿರುದ್ಧ ಪ್ರತಿಕ್ರಿಯಿಸತೊಡಗಿದವು.

ಮೊಘಲರ ಆಳ್ವಿಕೆಯ ನಂತರ ವಸಾಹತು ಶಾಹಿ ಕಾಲಘಟ್ಟದಲ್ಲಿ ಜಾರಿಗೆ ಬಂದಂತೆ ಜಾಮಿನ್ದಾರಿ ಪದ್ಧತಿ, ಭೂ ಕಾಯ್ದೆ ಮುಂತಾದವುಗಳು ಹೊಂದಿರುವ ನೀತಿ ನಿಯಮಗಳು ನೇರವಾಗಿ ಸಮುದಾಯದ ಮೇಲೆ ಪರಿಣಾಮ ಬೀರಿದವು. ಈ ರೀತಿಯ ಒಂದು ಪ್ರವೃತ್ತಿಯ ಕಾರಣದಿಂದ ಅನೇಕ ಸಮೂದಾಯಗಳು ತಮ್ಮ ಮೂಲ ನೆಲೆಯನ್ನೇ ಕಳೆದುಕೊಳ್ಳುವಂತಾಗಿ ಅತಂತ್ರ ಸ್ಥಿತಿಗೆ ತಲುಪುವಂತಾಯಿತು. ಕಂಪನಿ ಆಡಳಿತದ ಈ ರೀತಿಯ ಧೋರಣೆಯಿಂದ ರೊಚ್ಚಿಗೆದ್ದ ಅನೇಕ ಸಮುದಾಯಗಳು ದೇಶಾದ್ಯಂತ ದಂಗೆಯೆದ್ದು ಹೋರಾಟಕ್ಕೆ ಇಳಿದವು. ಇಂಥಹ ಪ್ರಮುಖವಾದ ಹೋರಾಟಗಳಲ್ಲಿ 'ಹಲಗಲಿಯ ಬೇಡರ' ಪಾತ್ರವು ಮುಖ್ಯವಾಗಿರುವುದು.

ಬ್ರಿಟಿಷರ ಆಳ್ವಿಕೆ ದಿನದಿಂದ ದಿನಕ್ಕೆ ವಿಸ್ತೃತಗೊಳ್ಳುತ್ತಿದ್ದಂತೆ ತಮ್ಮ ಅಸ್ತಿತ್ವದ ಪ್ರಶ್ನೆ ಎದುರಾದುದು ಬೇಡರಿಗೆ ಅತಿಶಯೋಕ್ತಿಯಾಗಲಾರದು. ಇವರು ಶಸ್ತ್ರಾಸ್ತ್ರಗಳನ್ನು ಹೊಂದಿರುವ ಜನರಿಂದ ನಮಗೆ ಅಪಾಯ ತಪ್ಪಿದಲ್ಲವೆಂದು ಖಚಿತಪಡಿಸಿಕೊಂಡರು. ಹೀಗೆ ಅನುಭವಿಸಬಹುದಾದ ಘಟನೆಗಳನ್ನು ತಪ್ಪಿಸಲು (ತಮ್ಮ ಮೇಲೆ) ೧೮೫೭ರಲ್ಲಿ ನಿಶ್ಯಸ್ತ್ರೀಕರಣ ಕಾಯ್ದೆಯನ್ನು ಜಾರಿಗೆ ತಂದರು. ಇದನ್ನು ಮೊಟ್ಟಮೊದಲು ವಿರೋಧಿಸಿದವರು ಕರ್ನಾಟಕದ ಬೇಡರು. ಹಿರಿಮೆಯನ್ನು ಹೊಂದಿರುವ, ನಾಡ ಪ್ರೇಮವನ್ನು ತೋರ್ಪಡಿಸುವ ಕಿಚ್ಚಿನ ಬೇಡರಿಗೆ ಇದು ನುಂಗಲಾರದ ತುತ್ತಾಯಿತು. ಆಧುನಿಕ ಗಾಳಿಗೆ ಸಿಲುಕಿದ ಮುಧೋಳ ತಾಲೂಕಿನ ಹಲಗಲಿ ಬೇಡರು ಬ್ರೀಟಿಷರ ಈ ಕಾಯ್ದೆಯನ್ನು ವಿರೋಧಿಸಿ ದಂಗೆ ಎದ್ದು ಹೋರಾಟ ನಡೆಸಿದರು. ಇದು ಭಾರತದಾದ್ಯಂತ ಸುದ್ಧಿ ಮಾಡಿತು. ಅನೇಕ ಬೇಡರ ವೀರಮಣಿಗಳು ಈ ಸ್ವಾತಂತ್ರ್ಯ ಹೋರಾಟದ ಮೊದಲ ಹಂತದಲ್ಲಿ ಪಾಲ್ಗೊಂಡಿದು ಅವಿಸ್ಮರಣೀಯ. ಇವರು

ಆತ್ಮರಕ್ಷಣೆಗಿಂತ ದೇಶ ರಕ್ಷಣೆಗೆ ಕೊಟ್ಟಿದ್ದ ಮಹತ್ವದಿಂದ ಇಂದಿಗೂ ಹಲಗಲಿ ಬೇಡರೆಂದರೆ ಭಾರತದ ಬುಡಕಟ್ಟು ಜನರ ಹೋರಾಟಗಳಲ್ಲಿ ಇವರನ್ನು ಅಗ್ರ ಪಂಕ್ತಿಯಲ್ಲಿಟ್ಟು ನೋಡುತ್ತಾರೆ."[೧೦]

ಹಲಗಲಿಯ ಬೇಡರಂತೆ ಹರಿಣ ಶಿಕಾರಿ ಸಮೂದಾಯವು ಬ್ರಿಟೀಷರ ವಿರುದ್ಧ ಹೋರಾಟಗಳಲ್ಲಿ ಭಾಗವಹಿಸಿರುವುದು ತಿಳಿದು ಬರುತ್ತದೆ.

ನಮ್ಮ ಪೂರ್ವಜರು ಸ್ವತಂತ್ರ್ಯ ಹೋರಾಟದಲ್ಲಿ ತೊಡಗಿದ್ದರು ಅವರ ವಿರುದ್ಧ ದಂಗೆಯೆದಿದ್ದಕ್ಕೆ ಜೈಲು ಸೆರೆಗೆ ಒಳಗಾದರು ಎಂದು ಹೇಳುತ್ತಾರೆ.

### ೨.೧. ಹರಿಣ ಶಿಕಾರಿ ಪದದ ನಿಷ್ಪತ್ತಿ

ಪಾರ್ದಿ ಬುಡಕಟ್ಟನ್ನು ಪಾನ್ಸೆ, ಪಾರ್ದಿ, ವಾಘ, ಪಾರ್ದಿ, ರಾಜಪಾರ್ದಿ, ಪಾಲ್ ಪಾರ್ದಿ, ಲಂಗೋಟಿ ಪಾರ್ದಿ, ರಾಜ ಪಾರ್ದಿ, ಚಿತಾವಾತಾ ಪಾರ್ದಿ, ತೆಲವೆಚೆನಯ್ಯಾ ಪಾರ್ದಿ, ಚಿಗರಿ ಬೇಟೆಗಾರರು, ಅಡವಿ ಚೆಂಚರು, ಹರಿಣ ಶಿಕಾರಿ ಮುಂತಾದ ಹೆಸರುಗಳಿಂದ ಗುರುತಿಸಲ್ಪಡುತ್ತಾರೆ.

ಇವರು ಭಾರತದಾದ್ಯಂತ ಹರಡಿಕೊಂಡಿದ್ದಾರೆ. ಪ್ರಾದೇಶಿಕ ವ್ಯತ್ಯಾಸದ ಹಿನ್ನಲೆಯಲ್ಲಿ ಅವರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ ಮತ್ತು ಅವರು ಮಾಡುವ ಕುಲಕಸಬುನ್ನು ಆಧರಿಸಿ ಅವರಿಗೆ ವಿಭಿನ್ನ ಹೆಸರುಗಳಿಂದ ಗುರುತಿಸಲಾಗುವುದು. ಇವರು ಭಾರತದಲ್ಲಿ ಗುಜರಾತ, ಮಧ್ಯ ಪ್ರದೇಶ, ಮಹಾರಾಷ್ಟ್ರ, ಮಧ್ಯ ಪ್ರದೇಶ, ಕರ್ನಾಟಕ, ಆಂಧ್ರ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

"ಪಾನ್ಸೆಪಾರ್ದಿ ಎನ್ನುವ ಪದ 'ಪಾರದ್' ಎಂಬ ಪದದಿಂದ ಉಗಮಗೊಂಡಿದೆ. ಪಾರದ ಎಂದರೆ ಬೇಟೆಯಾಡುವುದು ಎಂದರ್ಥ, ಫಾನ್ಸ್ ಎಂದರೆ ಗಲ್ಲು ಹಾಕುವುದು ಹಾಕುವುದರ ಮೂಲತಃ ಬೇಟೆಯಾಡುವುದರಿಂದ ಇವರಿಗೆ ಫಾನ್ಸೆ ಪಾರ್ದಿ ಎಂಬ ಹೆಸರು ಬಂದಿರುವುದು.

ಪಾನ್ಸೆ ಪಾರ್ದಿ ಬುಡಕಟ್ಟುಗಳೆಂದು ಮಹಾರಾಷ್ಟ್ರದಲ್ಲಿ ಇವರನ್ನು ಕರೆಯುವರು. ಮಹಾರಾಷ್ಟ್ರದಲ್ಲಿ ಈ ಬುಡಕಟ್ಟಿನ ಜನರು ಮರಾಠಿ ಪದಗಳನ್ನು ಅತ್ಯಧಿಕ ತಮ್ಮ ಭಾಷೆಯಲ್ಲಿ ಬಳಕೆ ಮಾಡಿಕೊಂಡಿರುವುದನ್ನು ನೋಡಬಹುದು. ಮಹಾರಾಷ್ಟ್ರದಲ್ಲಿನ ಕೆಲವೊಂದು ಆಚರಣೆ ಪದ್ಧತಿಗಳನ್ನು ಕೂಡಾ ಇವರು ಸ್ವಲ್ಪ ಮಟ್ಟಿಗೆ ಸ್ವೀಕರಿಸಿಕೊಂಡಿದ್ದಾರೆ.

"ಆಂಧ್ರ ಪ್ರದೇಶದ ಪಾರ್ದಿಗಳನ್ನು ಪಾಲ್, ಲಂಗೋಟಿ ಮತ್ತು ಚಿತೆವಾತಿ ಪಾರ್ದಿಗಳೆಂದು ಕರೆಯುವರು."[೧೨] ಪಾಲ್ ಪಾರ್ದಿಗಳು ಸಮೂಹ ಮತ್ತು ಗುಂಪುಗಳಲ್ಲಿ ನೆಲೆಗೊಂಡಿರುವುದರಿಂದ ಇವರನ್ನು ಪಾಲ್ ಪಾರ್ದಿ ಎಂದು ಕರೆಯುವರು, ಚಿತಾವಾಲಿ ಪಾರ್ದಿ ಎಂದರೆ 'ಚಿತಾ' ಅಂದರೆ ಚಿರತೆ ಎಂದರ್ಥ ಅಂದರೆ ಚಿರತೆಯನ್ನು ಬೇಟೆಯಾಡುವವರಿಗೆ ಚಿತಾವಾಲಿ ಪಾರ್ದಿ ಎಂದು ಕರೆಯುವರು."

"ಲಂಗೋಟಿ ಪಾರ್ದಿಗಳು ಕಾಡು ಮೇಡುಗಳಲ್ಲಿ ಅಲೆಯುತ್ತಿದ್ದು, ಇವರು ಇರುವ ಸ್ಥಳವು ಶುಷ್ಕತೆಯಿಂದ ಕೂಡಿರುವುದರಿಂದ ಇವರು ಲಂಗೋಟಿಯನ್ನಾಧರಿಸುವರು ಆದ್ದರಿಂದ ಇವರನ್ನು ಲಂಗೋಟಿ ಪಾರ್ದಿಗಳೆಂದು ಕರೆಯುವರು."[೧೩]

"ಮಧ್ಯಪ್ರದೇಶದ ಬಸ್ತರ ಜಿಲ್ಲೆಯಲ್ಲಿಯ ಪಾರ್ದಿಗಳನ್ನು ನೆಹರು ಎಂದು ಕರೆಯುವರು ಮಧ್ಯಪ್ರದೇಶದ ಹಲವೆಡೆ ಬಾಹೆಲ್ಲಿಯ ಮತ್ತು ಚಿತಾಪಾರ್ದಿ ಬುಡಕಟ್ಟುಗಳು ವಾಸಿಸುತ್ತವೆ."[೧೪]

ಗಾಯ ಪಾರ್ಡ್ಡಿ ಎಂತಲೂ ಪಾರ್ಡ್ಡಿ, ಪಾನ್ಸೆ ಪಾರ್ಡ್ಡಿಯವರನ್ನು ಕರೆಯುತ್ತಾರೆ. ಇವರು ಬೇಟೆಮಾಡಲು ಆಕಳುಗಳ ಬಳಕೆಯನ್ನು ಮಾಡುತ್ತಿದ್ದರು. ಅಂದರೆ ಆಕಳನ್ನು ತರಬೇತುಗೊಳಿಸುವುದರ ಮೂಲಕ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. ಆದ್ದರಿಂದ ಇವರನ್ನು ಗಾಯ ಪಾರ್ಡ್ಡಿ ಎಂದು ಕರೆಯುತ್ತಾರೆ.”[೧೫]

“ಬುಡಕಟ್ಟಿನ ಇನ್ನೊಂದು ಭಾಗವಾದ ಬುಡಕಟ್ಟು ತೆಲವೇಚನಯ ಪಾರ್ಡ್ಡಿ ಇವರು ನೈಸರ್ಗಿಕ ಖನಿಜ ತೈಲವ ವ್ಯಾಪಾರವನ್ನು ಮಾಡುವುದರಿಂದ, ಇವರಿಗೆ ತೆಲವೇಚನಯ ಎಂದು ಕರೆಯುವರು.”[೧೬]

ಕರ್ನಾಟಕದಲ್ಲಿ ಪಾನ್ಸೆ ಪಾರ್ಧಿ ಬುಡಕಟ್ಟನ್ನು ಅಡವಿಚೆಂಚರು, ಹಕ್ಕಿಪಿಕ್ಕಿಗಳೆಂದು ಕರೆಯುವರು.

“ಹಕ್ಕಿ-ಪಿಕ್ಕಿ ಎಂಬ ಹೆಸರು ಇವರ ಸಾಂಪ್ರದಾಯಿಕ ಕಸಬು ಹಕ್ಕಿಗಳನ್ನು ಹಿಡಿಯುವುದರಿಂದ ಬಂದಿರುವುದು. ಹಕ್ಕಿ-ಪಿಕ್ಕಿ ಕನ್ನಡದ ಜೋಡು ನುಡಿ, ಹಕ್ಕಿ ಎಂದರೆ ಪಕ್ಷಿ, ಪಿಕ್ಕಿ ಅದರ ಪ್ರತಿಧ್ವನಿ ರೂಪ, ಕಿಟಲ್ ನಿಘಂಟುವಿನಲ್ಲಿ ಹಕ್ಕಿಯನ್ನು ಹೆಕ್ಕಿ ಎಂಬ ಅರ್ಥದಿಂದ ನಿಷ್ಪನ್ನವಾಗಿದೆ.”[೧೭]

ಹರಿಣ ಶಿಕಾರಿ ಎಂಬ ಪದವು, ‘ಹರಣ’ ಎಂದರೆ ಚಿಗರೆ ಮತ್ತು ‘ಶಿಕಾರಿ’ ಎಂದರೆ ಬೇಟೆಗಾರರು ಎಂದರ್ಥ ಅಂದರೆ ಚಿಗರೆಯನ್ನು ಬೇಟೆಯಾಡುವವರು ಹರಿಣ ಶಿಕಾರಿಗಳು.

### ೨.೨. ಕ್ರಿಮಿನಲ್ ಟ್ರೈಬ್ ಆ್ಯಕ್ಟ್

ಹರಿಣ ಶಿಕಾರಿ ಸಮೂದಾಯವನ್ನು ೧೮೭೧ರ Criminal tribe act ಅಡಿಯಲ್ಲಿ ಗುರುತಿಸಲಾಗಿರುವುದರಿಂದ ಈ ಅಧಿನಿಯಮದ ಕೆಲವೊಂದು ಮಾಹಿತಿಗಳನ್ನ ಇಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

ಮೊಗಲ ವಂಶದ ಅವನತಿಯ ನಂತರ ೧೮೧೩ರಲ್ಲಿ ಬ್ರಿಟೀಷರು ಭಾರತದಲ್ಲಿ ನೆಲೆಯೂರಿದರು. ಭಾರತಕ್ಕೆ ವ್ಯಾಪಾರಕ್ಕಾಗಿ ಬಂದಿದ ಬ್ರಿಟೀಷರು ಭಾರತದ ಆಂತರಿಕ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಒಳತಿರುವುಗಳನ್ನು ತಿಳಿದುಕೊಂಡಿದ್ದರು. ಅವಕಾಶವಾದಿಗಳಾದ ಬ್ರಿಟೀಷರು ಇದರ ಒಳ್ಳೆಯ ಅವಕಾಶವನ್ನು ಪಡೆದುಕೊಂಡು ವಿವಿಧ ದಂಗೆಗಳನ್ನು ಕುತಂತ್ರದಿಂದ ಹತ್ತಿಕ್ಕುವುದರ ಮೂಲಕ ಇಡೀ ದೇಶದ ಮೇಲೆ ತಮ್ಮ ಹಿಡಿತವನ್ನು ಸಾಧಿಸಿದರು. ಇದರಿಂದ ಇಡೀ ದೇಶದ ಜನತೆಯ ಸ್ವತಂತ್ರ್ಯತೆಯನ್ನೇ ಕಿತ್ತುಕೊಂಡಂತಾಯಿತು. ಇಂಥಹ ಒಂದು ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು ಸಾಮಾನ್ಯ ಜನರಿಗಿಂತ ಬುಡಕಟ್ಟು ಜನಸಮುದಾಯಗಳ ಮೇಲೆ ಹೆಚ್ಚಿನ ಪರಿಣಾವನ್ನು ಬೀರಿತು.

ದೇಶದ ಚರಿತ್ರೆಯುದ್ದಕ್ಕೂ ನೋಡಿದಾಗ ಅನೇಕ ಬುಡಕಟ್ಟು ಸಮೂದಾಯಗಳು ತಮ್ಮದೇ ಆದ ಭಿನ್ನ-ಭಿನ್ನ ವೇಷಗಳಲ್ಲಿ ಭಿನ್ನವಾದ ಸಾಂಸ್ಕೃತಿಕ ಆಚರಣೆಗಳನ್ನು ಹೊಂದಿದ್ದರು. ಇಂಥಹ ಬುಡಕಟ್ಟು ಸಮುದಾಯಗಳು ಕಾಡು-ಮೇಡು, ಬೆಟ್ಟ-ಗುಡ್ಡ ಗ್ರಾಮಗಳಲ್ಲಿ ವಾಸವಾಗಿದ್ದಾಗ ತಮ್ಮದೇ ಆದಂತ ಕೆಲವೊಂದು ಕುಲಕಸಬುಗಳನ್ನು ಆಧರಿಸಿದ್ದರು. ಆದರೆ ಬ್ರಿಟೀಷ್‌ರ ಆರ್ಥಿಕ ಕಂಪನಿ ಆಡಳಿತವು ಅನೇಕ ಪದ್ಧತಿಗಳನ್ನು ಜಾರಿಗೆ ತಂದಿತು. ಅದರಲ್ಲಿ ಜಮೀನ್ದಾರಿ ಪದ್ಧತಿಯು ಮುಖ್ಯವಾಗಿತ್ತು. ಇದರ ಪರಿಣಾಮವಾಗಿ ಅನೇಕ ಸಮುದಾಯಗಳು ತಮ್ಮ ಸ್ವಂತ ಭೂಮಿಯನ್ನು ಕಳೆದುಕೊಂಡಿತು. ಇದರಿಂದ ಸಂಪೂರ್ಣವಾಗಿ ಇವರ ಆರ್ಥಿಕ ಮೂಲದ ಮೇಲೆ ಕೊಡಲಿ ಪೆಟ್ಟಾಯಿತು. ಇದರಿಂದ ಈ

ಸಮೂದಾಯಗಳು ಅತಂತ್ರ ಸ್ಥಿತಿಗೆ ತಲುಪುವಂತಾಯಿತು. ಕಂಪನಿ ಆಡಳಿತದ ಹೊಸ ಕೃಷಿ ನೀತಿ ಮತ್ತು ಭೂ ಕಂದಾಯ ಮತ್ತು ತೆರಿಗೆ ವ್ಯವಸ್ಥೆಗಳು ದೇಶೀಯ ವ್ಯವಸ್ಥಾಯೀ ಸಂರಚನೆಯನ್ನು ಮತ್ತು ವಾಣಿಜ್ಯ ವ್ಯವಹಾರಗಳನ್ನು ನಿಯಂತ್ರಿಸತೊಡಗಿದವು. ಇದರಿಂದ ಕುಶಲಕರ್ಮಿ, ಆದಿವಾಸಿ ಮತ್ತು ಅಲೆಮಾರಿ ಸಮುದಾಯಗಳು ದಿಕ್ಕು ತಪ್ಪಿದಂತಾಯಿತು. ಆ ಸಂದರ್ಭದಲ್ಲಿ ಕಂಪನಿಯ ಆಡಳಿತ ವಿರುದ್ಧ ಈ ಸಮುದಾಯದವರು ದಂಗೆಯೆದ್ದರು.”[೧೮]

ಇಂತಹ ಗಂಭೀರತೆಯ ವಾತಾವರಣ ಸೃಷ್ಠಿಯಾದಾಗ ಅದನ್ನು ಹತ್ತಿಕ್ಕಲು ಈ ಬುಡಕಟ್ಟು ಪ್ರಯತ್ನಿಸಿದವು. ಅವರ ಮೇಲೆ ತಮ್ಮ ಹಿಡಿತವನ್ನು ಗಟ್ಟಿಗೊಳಿಸಲು ಪ್ರಯತ್ನಿಸಿದರು. ಇದರ ತತ್ಪಾರ್ಯವಾಗಿ ಅಲೆಮಾರಿ ಸಮುದಾಯಗಳನ್ನು ಕಳ್ಳರು, ದರೋಡೆಕೋರರು, ಅಪರಾಧಿಗಳೆಂದು ದೂಷಿಸುವುದರ ಮೂಲಕ ಅಥವಾ ಅಪಾದಿಸುವ ಮೂಲಕ ಈ ಸಮುದಾಯವನ್ನು ಅಪರಾಧಿ ಬುಡಕಟ್ಟು Criminal Tribe ಎಂತಲೇ ಕರೆದರು. ೧೮೭೧ರಲ್ಲಿ Criminal tribe act ಎಂಬ ಅಧಿನಿಯಮವನ್ನು ಜಾರಿಗೊಳಿಸುವುದರ ಮೂಲಕ ಅನೇಕ ಕಾನೂನಿನ ನಿಯಮಾವಳಿಗಳನ್ನು ಅವರ ಮೇಲೆ ಹೇರಲಾಯಿತು. ೧೮೭೧ರಲ್ಲಿ Criminal Tribe act “ಪ್ರತಿ ಹಳ್ಳಿಯ ಯಜಮಾನ ಮತ್ತು ತಳವಾರ ತಮ್ಮ ಗ್ರಾಮ ವ್ಯಾಪ್ತಿಯಲ್ಲಿ ಬರುವ ಜೀವಿಸುವ ಯಾವುದೇ ಆದಿವಾಸಿ ಗುಂಪು ಅಪರಾಧಿಗಳೆಂದು ಘೋಷಿಸುವ ಮತ್ತು ಅನಂತರ ಆ ಸಮುದಾಯಗಳ ಭೂಮಿಯನ್ನು ವಶಪಡಿಸಿಕೊಂಡು ತಮ್ಮ ಹತ್ತಿರದ ಪೋಲಿಸ್ ಠಾಣೆಗೆ ದೂರು ನೀಡುವ ಹಕ್ಕು ನೀಡಲಾಯಿತು.”[೧೯] ಹೀಗೆ ಅನೇಕ ಕಾಯ್ದೆ ಕಾನೂನುಗಳನ್ನು ಅತೀ ಕ್ರೂರತಾ ಮನೋಭಾವನೆಯಿಂದ ಅವರ ಮೇಲೆ ಹೇರುವುದರ ಮೂಲಕ ಅವರ ಜೀವನ ಉಳಿವಿಗಾಗಿ ಇದ್ದ ಆರ್ಥಿಕ ಮೂಲವೆನಿಸಿಕೊಂಡ ಭೂಮಿಯನ್ನೇ ವಶಪಡಿಸಿಕೊಳ್ಳಲಾಯಿತು. ಅವರನ್ನು ಅನಿವಾರ್ಯತೆಯ ಪರೀಸ್ಥಿತಿಗೆ ತಲಪುವಂತೆ ಮಾಡಲಾಯಿತು.

Criminal Tribe Actವು ಸಮುದಾಯಗಳ ಜೀವನವನ್ನೇ ತಲೆಬುಡಮೇಲಾಗುವ ರೀತಿಯಲ್ಲಿ ಮಾಡಿತು. ಆದ್ದರಿಂದ ಈ ವಿಷಯದ ಬಗ್ಗೆ ದೇಶಾದ್ಯಂತ ಅನೇಕ ಚರ್ಚೆಗಳು ನಡೆದವು. ಅನೇಕ ಪರಿಷತ್ತು ಮತ್ತು ಸಮಿತಿಯನ್ನು ಆಯೋಗಗಳನ್ನು ರಚಿಸುವುದರ ಮೂಲಕ ಅದರ ಬಗ್ಗೆ ಅಧ್ಯಯನ ಕೈಗೊಂಡರು ಮತ್ತು ಅದರ ವಿರುದ್ಧ ಹೋರಾಡಿದರು. ಭಾರತದ ಸಮಾಜ ಸುಧಾರಕರು, ಸ್ವಾತಂತ್ರ್ಯ ಹೋರಾಟಗಾರರು ಈ ಅಧಿನಿಯಮದ ವಿರುದ್ಧ ತೀವ್ರ ಪತಿಕ್ರಿಯೆ ವ್ಯಕ್ತಪಡಿಸಿದರು.

ಅಪರಾಧಿ ಬುಡಕಟ್ಟು ಅಧಿನಿಯಮವನ್ನು ೧೮೭೧ರಲ್ಲಿ ಬ್ರಿಟೀಷ್ ಸರಕಾರವು ಜಾರಿಗೊಳಿಸಿತು. ೧೮೭೧ರಿಂದ ಸ್ವತಂತ್ರ್ಯ ದೊರಕುವವರೆಗೂ ಸುಮಾರು ೧೯೮ ಸಮೂದಾಯಗಳನ್ನು ಗುರುತಿಸಿ ಈ ಸಮೂದಾಯದ ಜನರು ಹುಟ್ಟನಿಂದಲೇ ಕಳ್ಳರು, ದರೋಡೆಕೋರರು, ಅಪರಾಧಿಗಳು ಎಂತಲೇ ಘೋಷಿಸಲಾಯಿತು. ಅಷ್ಟೇ ಅಲ್ಲದೇ ಈ ಕಾಯ್ದೆಯ ನಿಮಮಾವಳಿಗಳನ್ನು ಅಮಾನವೀಯವಾಗಿ ಈ ಸಮೂದಾಯದ ಜನರ ಮೇಲೆ ಹೇರಲಾಯಿತು. ಈ ಅಧಿನಿಯಮದ ವಿರುದ್ಧ ಅನೇಕ ಗಣ್ಯ ವ್ಯಕ್ತಿಗಳು ಹೋರಾಟ ನಡೆಸಿದರು, ಪ್ರತಿಕ್ರಿಯಿಸಿದರು, ಅವುಗಳಲ್ಲಿ ಕೆಲವೊಂದು ಪ್ರಮುಖ ಘಟನೆಗಲು ಈ ಕೆಳಗಿನಂತಿವೆ.

೧. ಮೇ, ೧೯೩೫ರಲ್ಲಿ ತಿನ್ನೇವೆಲ್ಲಿಯಲ್ಲಿ ಅಪರಾಧಿ ಬುಡಕಟ್ಟು ಪರಿಷತ್ತನು ಕರೆಯಲಾಯಿತು. ಈ ಪರಿಷತ್ತಿಗೆ ಆಗಮಿಸಿದ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರೇ ಈ ಅಧಿನಿಯಮಕ್ಕೆ ವಿರೋಧವನ್ನು ವ್ಯಕ್ತಪಡಿಸಿದರು.

೨. ಅಕ್ಟೋಬರ್, ೧೯೩೬ರಲ್ಲಿ ಜನಸಮೂದಾಯದ ಬಗ್ಗೆ ಅಖಿಲ ಭಾರತೀಯ ಪರಿಷತ್ತಿನಲ್ಲಿ ದಿ.ಪ್ರಧಾನಿಯವರಾದ ಪಂಡಿತ ಜವಾಹರಲಾಲ್ ನೆಹರುರವರು ಭಾಷಣವನ್ನು ಮಾಡಿದರು.

೩. ಅಕ್ಟೋಬರ್, ೧೯೩೯ರಲ್ಲಿ ಬಿಹಾರದ ಗವರನರ ಆದ ಎಂ.ಎಸ್.ಆಣೆಯವರು ಭಾರತೀಯ ಅಪರಾಧಿ ಜನಸಮುದಾಯ ಸಮಿತಿಯ ಅಧ್ಯಕ್ಷೀಯ ಭಾಷಣ ನೀಡಿ, ಇದಕ್ಕೆ ತೀವ್ರ ವಿರೋಧ ಪ್ರತಿಕ್ರಿಯೆ ವ್ಯಕ್ತಪಡಿಸಿದರು.

೪. ಮಹಾತ್ಮ ಜ್ಯೋತಿರಾವ್ ಫುಲೆಯವರು 'ಕಿಸಾನ ಕಾ ಕೋಡಾ' ದಲ್ಲಿ ಈ ಜನಸಮೂದಾಯದ ಬಗ್ಗೆ ಉಲ್ಲೇಖಿಸಿದ್ದಾರೆ.

೫. ಮಹರ್ಷಿ ವಿಠ್ಠಲ ರಾಮಜಿ ಶಿಂಧೆಯವರು ಈ ಜನರೊಂದಿಗೆ ಇದ್ದು ಅವರ ಸಮಸ್ಯೆಗಳ ಬಗ್ಗೆ ಚರ್ಚಿಸಿ ಅನೇಕ ಲೇಖನಗಳನ್ನು ಬರೆದರು.

ಈ ಮೇಲಿನ ಅನೇಕ ಸಂಘಟನೆಗಳಿಂದಾಗಿ ಮತ್ತು ಸ್ವಾತಂತ್ರ್ಯ ದೊರೆತ ಪರಿಣಾವಾಗಿ ಅಪರಾಧಿ ಬುಡಕಟ್ಟು ಅಧಿನಿಯಮವನ್ನು ಮುಕ್ತಾಯಗೊಳಿಸಲಾಯಿತು. ಜಾತಿ ವ್ಯವಸ್ಥೆಯ ಆಧಾರದ ಮೇಲೆ ೮೦ ವರ್ಷಗಳ ದೀರ್ಘ ಕಾಲಾವಧಿಯವರೆಗೂ ಈ ನಿಯಮಗಳನ್ನು ಜಾರಿಗೊಳಿಸುವುದರ ಮೂಲಕ ಅಮಾನುಷವಾಗಿ ಈ ಜನ ಸಮೂದಾಯದ ಬಗ್ಗೆ ನಡೆದುಕೊಳ್ಳಲಾಯಿತು. ಈ ದೀರ್ಘ ಕಾಲಾವಧಿಯವರೆಗಿನ ಸಮಾಜದಲ್ಲಿಯ ಈ ಜಾತಿ ವ್ಯವಸ್ಥೆಯನ್ನು ಜನರು ತುಂಬಾ ನಿರ್ಗಳವಾಗಿ ಒಪ್ಪಿಕೊಂಡಿದ್ದರು. ಅಪರಾಧಿ ಬುಡಕಟ್ಟಿನ ಜನರು ಹುಟ್ಟಿನಿಂದಲೇ ಅಪರಾಧಿಗಳೆಂದು ಸಾಮಾಜಿಕ ಮನಸ್ಥಿತಿಯು ಒಪ್ಪಿಕೊಳ್ಳುವುದರ ಮೂಲಕ ಇಂದಿಗೂ ಕೂಡಾ ಈ ಸಂಪ್ರದಾಯವು ಮುಂದುವರೆಯುತ್ತಾ ಬಂದಿದೆ.

೧೯೦೧ರ ಅಂಕಿಅಂಶದ ಪ್ರಕಾರ ಅಲೆದಾಡುವ ಪಾರ್ಧಿ ಜನಸಂಖ್ಯೆಯನ್ನು ನಮೂದಿಸಿದೆ. ಅವುಗಳು ಈ ಕೆಳಗಿನಂತಿವೆ.

| ಕ್ರಮ ಸಂಖ್ಯೆ | ಪ್ರದೇಶ | ಪುರುಷರು | ಮಹಿಳೆಯರು |
|---|---|---|---|
| ೧. | ಕಚ್ಚ | ೪೩೧ | ೪೧೦ |
| ೨. | ಕಾಠೇವಾಡ | ೮ | ೪ |
| ೩. | ಸುರತ ಏಜೆನ್ಸಿ | ೩ | ೨ |
| ೪. | ಅಹಮದಾಬಾದ | ೧೩ | ೧೧ |
| ೫. | ಸುರತ | ೩೨ | ೨೭ |

| | | | |
|---|---|---|---|
| ೬. | ಪಂಚಮಹಲ್ಸ್ | ೨ | ೩ |
| ೭. | ಥಾಣಾ | ೧೧ | ೮ |
| ೮. | ಅಹಮದಾನಗರ | ೬೮ | ೮೪ |
| ೯. | ಖಾಂದೇಶ | ೨,೫೩೨ | ೨,೬೧೮ |
| ೧೦. | ನಾಸಿಕ | ೨೫೨ | ೨೫೮ |
| ೧೧. | ಪುಣೆ | ೫೫ | ೭೦ |
| ೧೨. | ಸಾತಾರಾ | ೭ | ೧೩ |
| ೧೩. | ಬಿಜಾಪುರ | ೧೬೦ | ೯೩ |
| ೧೪. | ಸೋಲಾಪುರ | ೨೬೪ | ೨೩೪ |
| ೧೫. | ಧಾರವಾಡ | ೩೯ | ೩೩ |
| ೧೬. | ಕೋಲಾರ | ೪೩ | ೪೪ |
| ೧೭. | ಸವನುರ ಸ್ಟೇಟ್ಸ್ | ೫ | ೪ |
| ೧೮. | ಕರಾಚಿ | ೪೮೬ | ೩೬೫ |
| ೧೯. | ಹೈದ್ರಾಬಾದ | ೭೪೯ | ೬೩೭ |
| ೨೦. | ಶಿಕಾರಿಪುರ | ೬೦೪ | ೪೯೧ |
| ೨೧. | ಥಾರ ಮತ್ತು ಪರತರ | ೨೮೬ | ೨೫೭ |
| ೨೨. | Upper sind frontier | ೨೭೦ | ೨೮೮ |
| | ಒಟ್ಟು | ೧೨,೨೧೪ | |

## ೨.೩. ವಸಾಹತುಗಳು

ಕರ್ನಾಟಕ ರಾಜ್ಯ ವಿಜಾಪೂರ ನಗರದಲ್ಲಿ ಹರಿಣ ಶಿಕಾರಿ ನೆಲೆಸಿರುವ ಪ್ರದೇಶವು ವಸಾಹತು ಪ್ರದೇಶವಾಗಿತ್ತು, ಈ ವಸಾಹತುಗಳ ಬಗ್ಗೆ ಕೆಲವೊಂದು ಮಾಹಿತಿಗಳನ್ನು ಈ ಕೆಳಗೆ ನೀಡಲಾಗಿದೆ.

೧೮೭೧ರಲ್ಲಿ ಅಪರಾಧಿ ಬುಡಕಟ್ಟು ಅಧಿನಿಯಮದ ಅಡಿಯಲ್ಲಿ ಭಾರತದಾದ್ಯಂತ ಬೇರೆ ಬೇರೆ ಪ್ರದೇಶದಲ್ಲಿ ನೆಲೆಸಿದ ಅನೇಕ ಸಮೂದಾಯಗನ್ನು ಅವರ ವಿಭಿನ್ನತೆಯ ಆಧಾರದ ಮೇಲೆ ಗುರುತಿಸಿ ಅವರನ್ನು ವಸಾಹತುಗಳಲ್ಲಿ ಇಡಲಾಯಿತು. ಈ ಅಧಿನಿಯಮದಡಿ ಘೋಷಿಸಿಲ್ಪಟ್ಟ ಕೆಲವೊಂದು ಅಪರಾಧಿ ಸಮೂದಾಯಗಳಲ್ಲಿ ಹರಿಣ ಶಿಕಾರಿಯಲ್ಲದೇ ಬೇರೆ ಬೇರೆ ಸಮೂದಾಯಗಳ ಹೆಸರನ್ನು ಪ್ರಸ್ತಾಪಿಸಲಾಗಿದೆ. ಈ ಸಮೂದಾಯದವರು ಅನೇಕ ಕಾನೂನು ಬಾಹಿರ ಕೆಲಸಗಳಲ್ಲಿ ತೊಡಗಿದ್ದಾರೆ ಎಂದು ಅವರನ್ನು ವಸಾಹತುಗಳಲ್ಲಿ ಕೂಡಿಹಾಕಲಾಯಿತು. ಭಾರತಾದ್ಯಂತ ಒಟ್ಟು ೫೨ ವಸಾಹತುಗಳ ಸ್ಥಾಪನೆ ಮಾಡಲಾಯಿತು. ಕರ್ನಾಟಕದಲ್ಲಿ ಒಟ್ಟು ೫ ವಸಾಹತುಗಳಿದ್ದು ಆವು ವಿಜಾಪೂರ, ಬಾಗಲಕೋಟೆ, ಹುಬ್ಬಳಿ, ಧಾರವಾಡ, ಗದಗ. ೧೯೨೦ರಲ್ಲಿ ಬಾಂಬೆ ಪ್ರಾಂತದ ಈಗಿನ ಕರ್ನಾಟಕದ ವಿಜಾಪುರದಲ್ಲಿ ಮೊದಲನೇಯ ವಸಹಾತು ಸ್ಥಾಪನೆಯಾಯಿತು. ವಿಜಾಪುರದಲ್ಲಿ ೧೦,೦೦೦ ಜನರು ನೆಲೆಸಿದ್ದಾರೆ.

“Criminal Tribe Actನ್ನು ೧೯೧೧ರಲ್ಲಿ ಬ್ರಿಟೀಷರು ಆಳುವ ಭಾರತದಲ್ಲಿ ಪರಿಷ್ಕರಿಸಿ ವಿಸ್ತರಿಸಲಾಯಿತು. ಮುಂದುವರೆದು, ೧೯೮೭, ೧೯೧೧, ೧೯೨೩, ೧೯೨೪ ಮತ್ತು ೧೯೪೭ ಈ ವರ್ಷಗಳಲ್ಲ ಈ ಅಧಿನಿಯಮಕ್ಕೆ ತಿದ್ದುಪಡ್ಡಿ ಮಾಡಿ ಪರಿಷ್ಕರಿಸಲಾಯಿತು.”[20] ೧೯೨೪ರ Criminal Tribe Act ಪ್ರಕಾರ ಈ ವಸಾಹತುಗಳು ಮುಂಬೈ ಕರ್ನಾಟಕದ ಹುಬ್ಬಳಿ, ಧಾರವಾಡ, ಗದಗ, ವಿಜಾಪುರ ಮುಂತಾದ ಕಡೆ ಇದ್ದವು. ೧೯೨೪ರಲ್ಲಿ ಕಾಯ್ದೆಯ ಅಡಿಯಲ್ಲಿ ಮೀಸಲಾತಿ ಸೌಲಭ್ಯವನ್ನು ಕಲ್ಪಿಸಿತು. ೧೯೬೦ರಲ್ಲಿಬೆಳಗಾವಿ, ಧಾರವಾಡ, ಗದಗ, ಉತ್ತರ ಕನ್ನಡ ಜಿಲ್ಲೆಗಳಿಗೆ ಸೀಮಿತಗೊಂಡಂತೆ ಪರಿಶಿಷ್ಠ ಪಂಗಡದ ಪಟ್ಟಿಯಲ್ಲಿ ದಾಖಲಿಸಲಾಯಿತು. ಆಗ ಹರಿಣ ಶಿಕಾರಿ ಸಮೂದಾಯವು ತನ್ನ ಪ್ರಾದೇಶಿಕ ಮಿತಿಯನ್ನು ಸಡಿಸಿಲಿಕೊಂಡು ೧೯೭೬ರಲ್ಲಿ ಕರ್ನಾಟಕದಾದ್ಯಂತ ಹರಡಿಕೊಂಡರು.

ವಸಾಹತುಗಳಲ್ಲಿ ನೆಲೆಸಿದ ಸಮೂದಾಯಗಳ ಬಗ್ಗೆ ಮುನ್ನೇಚ್ಚರಿಕೆಯನ್ನು ವಹಿಸಲು ಜಿಲ್ಲೆಯ ಉಸ್ತುವಾರಿಯನ್ನು ನೋಡಿಕೊಳ್ಳಲು ಕಲೆಕ್ಟರನ್ನು ನೇಮಿಸಿದರು. ಈ ವಸಾಹತುಗಳಿಂದ ಹೊರ ಹೋಗಬೇಕಾದರೇ ಗುರುತಿನ ಚೀಟಿಯನ್ನು ತೋರಿಸಿ ನಿಗದಿತ ಸಮಯದಲ್ಲಿ ಹೊರ ಹೋಗಿ ಬರುವಂತೆ ಮಾಡಿದರು. ಹೀಗೆ ಈ ಸಮೂದಾಯಗಳ ಬಗ್ಗೆ ಅಮಾನವೀಯ ಧೋರಣೆಯನ್ನು ತಳೆಯಲಾಯಿತು.

“೧೯೪೭ರಲ್ಲಿ ಮದ್ರಾಸ್ ಮತ್ತು ೧೯೪೯ರಲ್ಲಿ ಮುಂಬೈ ಅಧಿಪತ್ಯಗಳಲ್ಲಿಯೂ ಅಪರಾಧಿ ಬುಡಕಟ್ಟು ಅಧಿನಿಯಮವನ್ನು ಹಿಂದಕ್ಕೆ ತೆಗೆದುಕೊಳ್ಳಲಾಯಿತು. ಮುಂದೆ ಭಾರತೀಯ ಅಪರಾಧೀ ಬುಡಕಟ್ಟುಗಳ ತನಿಖಾ ಸಮಿತಿಯ ಮೌಲ್ಯಮಾಪನದ ವರದಿಯ ಮೇರೆಗೆ ೧೯೫೨ರಲ್ಲಿ ಅಪರಾಧಿ ಬುಡಕಟ್ಟುಗಳನ್ನು ವಿಮುಕ್ತಗೊಳಿಸಲಾಯಿತು. ಅಂದಿನಿಂದ ಈ ಗುಂಪುಗಳನ್ನು ವಿಮುಕ್ತ ಬುಡಕಟ್ಟುಗಳು ಎಂದು ಕರೆಯುವರು.”[21] ಈ ಅಧಿನಿಯಮವನ್ನು ರದ್ದುಗೊಳಿಸಲಾದರೂ ಇಂದಿಗೂ ಕೂಡಾ ಅವರನ್ನು ಅಪರಾಧಿ ಮನೋಭಾವನೆಯಿಂದಲ್ಲೇ ಗುರುತಿಸುತ್ತಾರೆ.

ವಸಾಹತುಗಳಿಂದ ಬಿಡುಗಡೆ ಹೊಂದಿದ ಅನೇಕ ಸಮೂದಾಯಗಳಲ್ಲಿ ಹರಿಣ ಶಿಕಾರಿ ಸಮೂದಾಯವು ಒಂದಾಗಿರುವುದು. ಹರಿಣ ಶಿಕಾರಿ ಸಮೂದಾಯದ ಜನರು ತಮ್ಮ ಪ್ರಾದೇಶಿಕ ಮಿತಿಯನ್ನು ಸಡಿಲಗೊಳಿಸುವುದರ ಮೂಲಕ ಕರ್ನಾಟಕದಾದ್ಯಂತ ಬೇರೆ ಬೇರೆ ಪ್ರದೇಶಗಳಲ್ಲಿ ಹಂಚಿಕೊಂಡು ಹೋದರು. ಇವರು ಕರ್ನಾಟಕ ಐದು ಜಿಲ್ಲೆಗಳಾದ ವಿಜಾಪುರ, ಗದಗ, ಧಾರವಾಡ, ಹುಬ್ಬಳಿ, ಬಾಗಲಕೋಟೆ ಅಧಿಕವಾಗಿ ಕಂಡುಬರುತ್ತಾರೆ.

ವಿಜಾಪುರದ ಹರಿಣ ಶಿಕಾರಿ ಸಮುದಾಯದಲ್ಲಿ ಏರ್ಪಟ್ಟ ಮದುವೆ ಸಂಬಂಧಗಳನ್ನು ಪ್ರದೇಶವಾರು ನೋಡುತ್ತಾ ಹೋದಾಗ ಅವರು ಪ್ರಾದೇಶಿಕ ವಿಸ್ತಾರವನ್ನು ತಿಳಿದುಕೊಳ್ಳಲು ಸಾಧ್ಯವಾಗುವುದು ಇವರು ತಮ್ಮ ಮದುವೆ ಸಂಬಂಧಗಳನ್ನು ವಿಜಾಪುರ ಜಿಲ್ಲೆಯ ತಾಲ್ಲೂಕುಗಳಾದ ಇಂಡಿ, ಬಸವನ ಬಾಗೇವಾಡಿ, ಮುದ್ದೇಬಿಹಾಳ ಅಲ್ಲದೇ ಗದಗ, ಹುಬ್ಬಳ್ಳಿ, ಧಾರವಾಡ ಜಿಲ್ಲೆಗಳಲ್ಲೂ ಬೆಳೆಸಿಕೊಂಡಿದ್ದಾರೆ. ಮಹಾರಾಷ್ಟ್ರದ ಸೊಲ್ಲಾಪುರದಿಂದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನವರೆಗೂ ತಮ್ಮ ಮದುವೆಯ ಸಂಬಂಧಗಳನ್ನು ವಿಸ್ತರಿಸಿಕೊಂಡಿದ್ದಾರೆ.

ಒಟ್ಟಿನಲ್ಲಿ ಹರಿಣ ಶಿಕಾರಿ ಸಮುದಾಯ ಪ್ರಾರಂಭದಿಂದಲೂ ಅಲೆಮಾರಿತನದಲ್ಲೇ ಜೀವನ ಸಾಗಿಸುತ್ತಾ ಬಂದಿದೆ. ಸ್ಥಿರವಾದ ನೆಲೆಯನ್ನು ಕಂಡುಕೊಳ್ಳಲು ಇವರಿಗೆ ಇದುವರೆಗೂ ಸಾಧ್ಯವಾಗಿಲ್ಲ. ಚಿಕ್ಕ ಚಿಕ್ಕ ಪಂಗಡಗಳಾಗಿ ನಾಡಿನಾದ್ಯಂತ ಹರಡಿದ ಹರಿಣ ಶಿಕಾರಿ ಸಮುದಾಯವು ಅತ್ಯಂತ ಬಡತನದಲ್ಲೇ ಬದುಕುತ್ತಿದ್ದಾರೆ. ಜನಸಾಮಾನ್ಯರು ಇಂದಿಗೂ ಇವರನ್ನು ಅಪರಾಧಿ ನೆಲೆಯಲ್ಲೇ ಕಾವವರು. ಹೀಗಾಗಿ ಸಮಾಜದ ಮುಖ್ಯವಾಹಿನಿಗೆ ಬರದೇ ಅಲೆಮಾರಿಗಳಾಗಿಯೇ ಜೀವಿಸುತ್ತಿದ್ದಾರೆ. ಇಂಥಹ ದುಸ್ಥಿತಿಯಲ್ಲಿರುವ ಈ ಸಮುದಾಯದ ಐತಿಹಾಸಿಕ ಹಿನ್ನಲೆ ಲಿಖಿತ ಆಧಾರಗಳಲ್ಲಿ ದೊರೆಯದೇ ಮೌಖಿಕವಾದ ಆಧಾರಗಳು ಮಾತ್ರ ಲಭ್ಯವಿದೆ.

## ಅಡಿಟಿಪ್ಪಣಿ

೧. ಹೆಚ್.ಡಿ.ಪ್ರಶಾಂತ: ಜನಸಮುದಾಯ ಸಂಪುಟ ಕರ್ನಾಟಕ ರಾಜ್ಯಕೋಶ-೪, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೧೨೬, ೨೦೦೨
೨. ಹೆಚ್.ಜೆ.ಲಕ್ಕಪ್ಪಗೌಡ: ಕರ್ನಾಟಕ ಬುಡಕಟ್ಟು ಸಂಪುಟ-೨, ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡಮಿ, ಪು-೭೪೩, ೨೦೦೦
೩. ರಾಜಪ್ಪ ದಳವಾಯಿ: ಹಕ್ಕಿಪಿಕ್ಕಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪು-೮೯, ೧೯೯೩
೪. ಲಾರೆನ್ಸ್ ಡಿಸೋಜ; ಹರಿಣಶಿಕಾರಿ; ಮ.ಸಂ. ೫೪
೫. ರಾಜಪ್ಪ ದಳವಾಯಿ: ಹಕ್ಕಿಪಿಕ್ಕಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡಮಿ, ಪು-೮, ೧೯೯೩
೬. ಮಾಹಿತಿ ನೀಡಿದವರು ಶಿವಾಜಿ ಚಾವ್ಹಾಣ, ಬಾಗಲಕೋಟೆ
೭. ಲಾರೆನ್ಸ್ ಡಿಸೋಜ; ಹರಿಣಶಿಕಾರಿ; ಮ.ಸಂ. ೬೪
೮. ಎ.ಎಸ್.ಪ್ರಭಾಕರ, ಆದಿವಾಸಿ ಆಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪು-೪೨೬೧, ೨೦೦೬
೯. ಎ.ಎಸ್.ಪ್ರಭಾಕರ: ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೮, ೨೦೦೦
೧೦. ಡಾ.ವಿರೂಪಾಕ್ಷಿ ಪೂಜಾರಹಳ್ಳಿ: ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು
೧೧. ಡಾ.ಕೆ.ಎಂ.ಮೈತ್ರಿ: ಬುಡಕಟ್ಟು ಕುಲಕಸಬುಗಳು, ಪು-೨೦೩
೧೨. ಅದೇ, ಪು-೨೦೩
೧೩. ಮಾಹಿತಿ ನೀಡಿದವರು ಶಿಜಿ ಕಾಳೆ, ವಿಜಾಪುರ
೧೪. ಡಾ.ಕೆ.ಎಂ.ಮೈತ್ರಿ: ಬುಡಕಟ್ಟು ಕುಲಕಸಬು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೨೦೩, ೨೦೦೨
೧೫. Criminal Classes: Bombay presidency, Pno-133, 1901
೧೬. Criminal Classes: Bombay presidency, Pno-143, 1901
೧೭. ಡಾ.ಕೆ.ಎಂ.ಮೈತ್ರಿ: ಬುಡಕಟ್ಟು ಕುಲಕಸಬು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೮೧, ೨೦೦೨
೧೮. ಎ.ಎಸ್.ಪ್ರಭಾಕರ: ಕರ್ನಾಟಕದ ಡೊಂಬರು, ಅಪ್ರಕಟಿತ ಪಿಎಚ್.ಡಿ., ಮಹಾಪ್ರಬಂಧ, ೨೦೦೬
೧೯. ಅದೇ,
೨೦. ಮಲ್ಲಿಕಾರ್ಜುನ ಬಿ ಮಾನ್ಪಡೆ: ಕೊರವ, ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆ, ಪು-xi, ೨೦೦೮
೨೧. ಅದೇ, ಪು-xii

ಅಧ್ಯಾಯ ಮೂರು

# ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಬದುಕು

ಸಮಾಜವು ಅನೇಕ ಸಮುದಾಯಗಳನ್ನು ಹೊಂದಿದ ಒಂದು ಘಟಕವಾಗಿದೆ. ಮಾನವನ ನಿರಂತರವಾದ ಚಟುವಟಿಕೆಯು ಸಾಮಾಜಿಕ ನೀತಿ ನಿಯಮಗಳ ಮಧ್ಯೆಯೇ ಕ್ರಿಯಾಶೀಲತೆಯನ್ನು ಹೊಂದಿದೆ. ಸಮಾಜವನ್ನು ಬಿಟ್ಟು ಮಾನವರಿಲ್ಲ. ಹೀಗಾಗಿ ಸಮಾಜವು ಮಾನವರ ಪ್ರತಿಯೊಂದು ಹಂತದ ಬದಲಾವಣೆಗೆ ಕಾರಣಿಭೂತವಾಗಿದೆ. ಸಮಾಜವು ಅನೇಕ ರೀತಿಯ ಕಟ್ಟುಪಾಡುಗಳನ್ನು ನೀತಿ ನಿಯಮಗಳನ್ನು ಹೊಂದಿರುವುದು. ಇದನ್ನು ಪೋಷಿಸಿ ಬೆಳೆಸಿದ ಮಾನವರು ಆದಿಮ ಕಾಲಘಟ್ಟದಲ್ಲಿ ಹುಟ್ಟಿಕೊಂಡ ಸಮುದಾಯಗಳ ಮುಂದೆ ಒಂದೆಡೆ ವಿಸ್ತೃತ ರೂಪದಲ್ಲಿ ನೆಲೆಗೊಳ್ಳುವುದರ ಮೂಲಕ ಸಮಾಜವು ನಿರ್ಮಾಣವಾಯಿತು. ಸಾಮಾಜಿಕ ಸಂದರ್ಭದಲ್ಲಿ ಅನೇಕ ರೀತಿಯ ಏರು- ಪೇರಿ ಸ್ಥಿತಿಯನ್ನು ದಾಟಿದ ಹಲವು ಸಮುದಾಯಗಳು ಅಭಿವೃದ್ಧಿಯ ಮಟ್ಟದಲ್ಲಿ ಸಾಧನೆ ಮಾಡಲು ಪ್ರಯತ್ನಿಸುತ್ತಿವೆ. ಈ ಒಂದು ಸಾಮಾಜಿಕ ಸಂರಚನೆಯ ವ್ಯವಸ್ಥೆಯಲ್ಲಿ ಮಹಿಳೆ ಮತ್ತು ಪುರುಷನ ಪಾತ್ರ ಮುಖ್ಯವಾಗಿರುವುದು.

ಮಾನವರು ಅಲೆಮಾರಿ ಜೀವನ ಸಾಗಿಸುವಂತ ಸಂದರ್ಭದಲ್ಲಿ ಮಹಿಳೆ ಮತ್ತು ಪುರುಷರಲ್ಲಿ ಯಾವುದೇ ರೀತಿಯ ಭೇಧಭಾವ ಇರಲಿಲ್ಲ. ಆಹಾರ ಸಂಗ್ರಹಣೆಯಿಂದ ಬೇಟೆಯಾಡುವವರೆಗೂ ಸಮಪಾಲಾದ ಶ್ರಮದಾಯಕ ಕ್ರಿಯೆಯಲ್ಲಿ ತೊಡಗಿದ್ದರು. ಬೇಟೆಯಾಡುವ ಸಂದರ್ಭದಲ್ಲಿ ಬೆಂಕಿಯ ಆವಿಷ್ಕಾರವನ್ನು ಕಂಡುಕೊಂಡು ಇದರ ಮೂಲಕ ಆಹಾರವನ್ನು ಬೇಯಿಸಿ ತಿನ್ನುವ ಕ್ರಿಯೆಯಲ್ಲಿ ತೊಡಗಿದರು ಮುಂದೆ ಹೆಣ್ಣು ತನ್ನ ದೇಹದ ನೈಸರ್ಗಿಕ ಕಾರಣದಿಂದ ಗಂಡಿನೊಡನೆ ಸೇರಿದ್ದಾಗ ಗರ್ಭವತಿಯಾದಳು. ಇಂತ ಸಂದರ್ಭದಲ್ಲಿ ಮಹಿಳೆ ಮತ್ತು ಪುರುಷನ ನಡುವೆ ಕೆಲಸದ ಹಂಚಿಕೆಯಾಯಿತು. ಮಹಿಳೆಯರು ಒಂದು ಕಡೆ ನೆಲೆಸಿ, ಪುರುಷರು ಬೇಟೆಯಾಡಿ ತಂದ ಪ್ರಾಣಿಗಳನ್ನು ಬೇಯಿಸುವ ಮತ್ತು ಹಂಚುವ ಕ್ರಿಯೆಯಲ್ಲಿ ತೊಡಗಿದ್ದರು. ಒಂದು ಕಡೆ ನೆಲೆಸಿದ ಮಹಿಳೆಯರು ಬೀಜದಿಂದ ಸಸಿಗಳು ಬೆಳೆದಿರುವುದನ್ನು ಕಂಡುಕೊಂಡರು ಹೀಗೆ ಕೃಷಿಯ ಬೆಳವಣಿಗೆಗೆ ನಾಂದಿಯಾಯಿತು. ಮಹಿಳೆಯರು ತಾವು ವಾಸಿಸುತ್ತಿದ್ದ ಪ್ರದೇಶ ಸುತ್ತಲೂ ಸ್ವಲ್ಪ ಸ್ಥಳವನ್ನು ಸ್ವಚ್ಛಗೊಳಿಸಿ ಕೃಷಿಯಲ್ಲಿ ತೊಡಗಿಕೊಂಡರು. ಅಲ್ಲದೆ ತಮಗೆ ಬೇಕಾದ ಆಹಾರ ಧಾನ್ಯಗಳನ್ನು ಬೆಳೆಯಲಾರಂಭಿಸಿದರು. ತಮ್ಮ ಜೀವನೋತ್ಪಾದನೆಗಾಗಿ ಬೆಳೆಸುತ್ತಿದ್ದ ಆಹಾರ ಉತ್ಪಾದನೆಯ ಮಟ್ಟ ವಿಸ್ತೃತವಾದಂತೆ ಅದು ಹಣದ ಮೌಲೀಕರಣಕ್ಕೆ ಒಳಗಾಯಿತು. ಇಂಥ ಸಂದರ್ಭದಲ್ಲಿ ಮಹಿಳೆಯರು ಕೃಷಿ ಕೆಲಸದಲ್ಲಿ ತೊಡಗಿದರೆ, ಪುರುಷರು ಮಾರುಕಟ್ಟೆಯ ವಲಯಕ್ಕೆ ಪ್ರದೇಶಿಸಿದರು. ಹೀಗೆ ಮಹಿಳೆಯರು ಖಾಸಗಿ ವಲಯಕ್ಕೆ ಸೀಮಿತವಾದರು. ಆದರೆ ಪುರುಷರು ಸಾರ್ವಜನಿಕ ವಲಯಕ್ಕೆ ಪ್ರವೇಶ ಪಡೆದು ಇಡೀ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯ ಮೇಲೆ

ಹಿಡಿತವನ್ನು ಸಾಧಿಸಿದರು. ಇಡೀ ಕೃಷಿ ವಲಯವು ಮಹಿಳೆಯರಿಂದ ಪುರುಷರಿಗೆ ವರ್ಗಾವಣೆವಾಯಿತು. ಶ್ರಮದಾಯಿಕ ಕೆಲಸದಲ್ಲಿ ಮಹಿಳೆಯರು ತೊಡಗಿಕೊಂಡರೆ ಅದರ ಲಾಭವನ್ನು ಪುರುಷರು ಪಡೆದುಕೊಂಡರು ಮಹಿಳೆಯರು ಮಾಡುವ ಕೆಲಸ ಕುಟುಂಬದ ಜವಾಬ್ದಾರಿ, ಅದು ಅವಳ ಕರ್ತವ್ಯ ಎಂಬ ಮಿತ್‌ಗಳನ್ನು ನೀಡುವುದರ ಮೂಲಕ ಅವಳನ್ನು ಸಂಪೂರ್ಣವಾಗಿ ಖಾಸಗಿ ವಲಯಕ್ಕೆ ಸೀಮಿತಗೊಳಿಸಲಾಯಿತು.

ಅಲೆಮಾರಿ ಜೀವನವನ್ನು ಸಾಗಿಸುತ್ತಿದ್ದ ಮಾನವನಲ್ಲಿ ಮುಕ್ತತೆ ಇತ್ತು. ಮಹಿಳೆಯನ್ನು ದೇವತೆಯ ಸ್ಥಾನದಲ್ಲಿಟ್ಟು ನೋಡಿಕೊಳ್ಳುತ್ತಿದ್ದರು. ಮಹಿಳೆಯರ ಸಂತಾನೋತ್ಪತ್ತಿ ಕ್ರಿಯೆಯು ಅವರಿಗೆ ಒಂದು ವಿಸ್ಮಯ, ನಿಸರ್ಗದ ನಿಗೂಢ ಸ್ಥಿತಿಯಂತಲೇ ಅವರು ಪರಿಭಾವಿಸಿಕೊಂಡಿದ್ದರು. ಕ್ರಮೇಣ ಸಂತಾನೋತ್ಪತ್ತಿಯ ಬಗ್ಗೆ ಅರಿತುಕೊಂಡ ಮಾನವ ಮಹಿಳೆಯರಿಗೆ ಹುಟ್ಟಿದ ಮಗು ತನ್ನದೇ ಎಂಬ ಭಾವನೆ ಬೆಳೆದಾಗ ಅಲ್ಲಿ ಖಾಸಗಿತನದ ಪರಿಕಲ್ಪನೆ ಹುಟ್ಟಿಕೊಂಡಿತು. ಅಲ್ಲಿ ಮಹಿಳೆಯರ ಲೈಂಗಿಕತೆ ಮತ್ತು ಸಂತಾನೋತ್ಪತ್ತಿಯ ಮೇಲೆ ತನ್ನ ಹಿಡಿತವನ್ನು ಸಾಧಿಸಿದನು. ಹೀಗೆ ಪುರುಷ ಮಹಿಳೆಯ ಮೇಲೆ ತನ್ನ ಪ್ರಭುತ್ವವನ್ನು ಸಾಧಿಸುವುದರ ಮೂಲಕ ಮಹಿಳೆಯನ್ನು ಎರಡನೇ ದರ್ಜೆಯ ಪ್ರಜೆಯಾಗಿ ಕಾಣಲಾರಂಭಿಸಿದನು.

ಪ್ರಾಚೀನ ಕಾಲದಿಂದಲೂ ನಿಸರ್ಗದ ಮಡಿಲಲ್ಲೇ ತನ್ನ ಬದುಕನ್ನು ಕಳೆದ ಮಾನವ, ಪ್ರಕೃತಿಯನ್ನೇ ಆರಾಧಿಸತೊಡಗಿದ. ಪ್ರಾರಂಭದ ತನ್ನ ಜೀವನನೋಪಾಯಕ್ಕೆ ಬೇಕಾದವುಗಳನ್ನು ಪ್ರಕೃತಿಯಿಂದಲೇ ಪಡೆಯಲಾರಂಭಿಸಿದ. ಹೀಗಾಗಿ ಆದಿಮ ಕಾಲಘಟ್ಟದಲ್ಲಿ ಅಲೆಮಾರಿ ಸುಮುದಾಯಗಳು ಕಾಡಿನೊಂದಿಗೆ ನಿಕಟವಾದ ಸಂಬಂಧವನ್ನಿಟ್ಟುಕೊಂಡಿದ್ದವು ಮಾತೃ ಪ್ರಧಾನ ವ್ಯವಸ್ಥೆಯಲ್ಲೆ, ಬದುಕಿದ ಹಲವು ಅಲೆಮಾರಿ ಬುಡಕಟ್ಟುಗಳಲ್ಲಿ ಹರಣಿ ಶಿಕಾರ ಸಮುದಾಯವು ಒಂದು ಅಲ್ಲಿ ಮಹಿಳೆಯರ ತಾಯ್ತನದ ಗುಣಸ್ವಭಾವದಿಂದ ಮಹಿಳೆಗೆ ಅಪಾರವಾದ ಪ್ರಾಮುಖ್ಯತೆಯನ್ನು ನೀಡಲಾಯಿತು. ಆದ್ದರಿಂದ ಅನೇಕ ಸಮುದಾಯಗಳಲ್ಲಿ ಮಾತೃ ಪ್ರಧಾನ ಕುಟುಂಬದ ಪ್ರತಿಬಿಂಬವನ್ನು ಕಾಣಬಹುದು "ಮಹಿಳೆ ಮತ್ತು ಪ್ರಕೃತಿಗಳು ಬದುಕಿನ ಉತ್ಪಾದಕರೆಂದು ಗುರುತಿಸಲ್ಪಟ್ಟಾಗ ಅವರಿಂದಾಗುವ ಎರಡು ಪರಿಣಾಮಗಳೆಂದರೆ ಮೊದಲಿಗೆ ಈ ಅಭಿವೃದ್ಧಿಯ ಹೆಸರಿನಲ್ಲಿ ನಡೆಯುತ್ತಿರುವ ವಿಕೃತಿಗಳು ಜಗತ್ತಿನೆಲ್ಲೆಡೆ ಪ್ರಕೃತಿ ಮತ್ತು ಮಹಿಳೆಯ ಮೇಲಿನ ಹಿಂಸೆಯ ಕಾರಣವೆಂದು ಒಪ್ಪಿಕೊಂಡಂತಾಗುತ್ತದೆ. ಈ ಹಿಂಸೆಯು ಪಿತೃಪ್ರಧಾನ ತತ್ವಗಳಾದ ಏಕರೂಪತೆ, ಮೇಲುಗೈ ಸಾಧಿಸುವಿಕೆ ಮತ್ತು ಕೇಂದ್ರಿಕರಣ"[9] ಇಂತಹ ಬೆಳವಣಿಗೆಯಿಂದಾಗಿ ಅನೇಕ ಮಾತೃಪ್ರಧಾನ ಕುಟುಂಬಗಳು ಇಂದು ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಗಳಾಗಿ ಪರಿವರ್ತಿತಗೊಂಡಿವೆ. ಆದಿಮ ಕಾಲಘಟ್ಟಗಳಲ್ಲಾದ ನಿರಂತರವಾದ ಬದಲಾವಣೆಗಳಿಂದಾಗಿ ಮಹಿಳೆಯು ಪಡೆದಿದ್ದ ಅಧಿಕಾರ ಕ್ರಮೇಣ ಪುರುಷನ ಸ್ವತ್ತಾಗಿದ್ದನ್ನು ಅನೇಕ ಬುಡಕಟ್ಟು ಸಮುದಾಯಗಳ ಐತಿಹ್ಯಗಳ ಮೂಲಕ ತಿಳಿಯಬಹುದು. ಹೀಗೆ ಮುಂದುವರೆದ ಅನೇಕ ಬುಡಕಟ್ಟು ಸಮುದಾಯಗಳು ವಿಶಿಷ್ಟವಾದ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿವೆ. ಇಂತಹ ಅನೇಕ ಬುಡಕಟ್ಟು ಸಮುದಾಯಗಳಲ್ಲಿ ಹರಣ ಶಿಕಾರಿ ಸಮುದಾಯವು ಒಂದಾಗಿದೆ.

## ೩.೧. ಸಾಮಾಜಿಕ ಸ್ಥಿತಿಗತಿ

ಹರಣ ಶಿಕಾರಿ ಸಮುದಾಯವು ತನ್ನದೇ ಆದಂತ ಭಿನ್ನವಾದ ಸಾಮಾಜಿಕ ಪರಿಮಿತಿಯನ್ನು ರಚಿಸಿಕೊಂಡಿದೆ. ಧಾರ್ಮಿಕ, ರಾಜಕೀಯ, ಆರ್ಥಿಕ, ಮತ್ತು ಶೈಕ್ಷಣಿಕ ಮುಂತಾದ ನೆಲೆಗಳಿಂದ ಹರಣಶಿಕಾರಿ ಸಮುದಾಯವನ್ನು ಅನುಲಕ್ಷಿಸಿದಾಗ ಸಮಾಜದ ಮುಖ್ಯವಾಹಿನಿಯಿಂದ ತುಂಬಾ ಹಿಂದುಳಿದಿರುವುದು ಕಂಡು ಬರುತ್ತದೆ. ಹರಣ ಶಿಕಾರಿ ಸಮುದಾಯವು ತಮ್ಮದೇ ಆದಂತ ಅನೇಕ ರೀತಿಯ ಕಟ್ಟುಪಾಡುಗಳನ್ನು ರಚಿಸಿಕೊಂಡು ಜೀವನವನ್ನು ಸಾಗಿಸುತ್ತಿದ್ದಾರೆ. ಪ್ರತಿಯೊಂದು ಸಮುದಾಯದಂತೆ ಹರಣ ಶಿಕಾರಿ ಸಮುದಾಯದವರಲ್ಲಿ ವಿಭಿನ್ನವಾದ ಸಾಂಸ್ಕೃತಿಕ ಆಚರಣೆಗಳು ಕಂಡುಬರುತ್ತವೆ. ಈ ಅಲೆಮಾರಿ ಸಮುದಾಯದಲ್ಲಿ ಮಹಿಳೆಯರಿಗಿರುವ ಪ್ರಾತಿನಿಧಿಯತೆಯ ಕುರಿತು ಚರ್ಚಿಸುವುದು ಮುಖ್ಯವಾಗಿದೆ. ಸಾಮಾಜಿಕ ಸಂಸ್ಥೆಗಳಾದ ಕುಟುಂಬ, ವಿವಾಹ, ಧರ್ಮ, ಶಿಕ್ಷಣ ಮುಂತಾದ ಘಟ್ಟಗಳಲ್ಲಿ ಹರಣ ಶಿಕಾರಿ ಮಹಿಳೆಯರ ಪಾಲ್ಗೊಳ್ಳುವಿಕೆಯ ಕ್ರಮವನ್ನು ಗಮನಿಸಿದಾಗ ಅದು ತೀವ್ರ ಕೆಳಮಟ್ಟದಲ್ಲಿರುವುದು ಕಂಡು ಬರುವುದು. "ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ನಿಯಂತ್ರಣ ಹೊಂದಿರುವ ಪುರುಷವರ್ಗ ತಾನು ಸೂಚಿಸಿದ ಮೌಲ್ಯಗಳನ್ನೇ ಸಾಮಾಜಿಕ ಸಾಂಸ್ಕೃತಿಕ ಪರಮ ಮೌಲ್ಯಗಳೆಂದು ಅರ್ಥೈಸಿದೆ. ಹಾಗೂ ಹೆಣ್ಣನ್ನು ಅದರಂತೆನೂ ಒಪ್ಪಿಕೊಂಡಿದೆ. ಸ್ತ್ರೀ ಪುರುಷರು ಬದುಕಬೇಕಾದ ರೀತಿ ನೀತಿಗಳನ್ನು ತಿಳಿಯುವ ನಿರ್ದೇಶಿಸುವ ಆಲೋಚನೆಗಳು ಪುರುಷ ಕೇಂದ್ರಿತವಾಗಿದ್ದು ಅದೇ ಪ್ರಧಾನ ವಾಹಿನಿಯ ಮೂಲವಾಗಿದೆ ಆದ್ದರಿಂದ ಹೆಣ್ಣು ಗಂಡಿಗಿಂತ ನಿರ್ಮಿತಳಾದ ವ್ಯಕ್ತಿ ಎನ್ನಿಸಿಕೊಂಡಿದ್ದಾಳೆ,"[೨] ಇಂತಹ ಸಂದರ್ಭದಲ್ಲಿ ಮಹಿಳೆಗೂ ಯಾವುದೇ ನಿರ್ಧಾರ ತೆಗೆದುಕೊಳ್ಳುವ ಹಕ್ಕಿಲ್ಲ ಎನ್ನುವಂತಹ ಅಭಿಪ್ರಾಯವನ್ನು ಅಭಿವ್ಯಕ್ತ ಪಡಿಸಿದ ಸಮಾಜ ಮಹಿಳೆಯನ್ನು ಸಾಮಾಜಿಕ ಮೇಲಸ್ತರದ ನಿರ್ಣಯ ತೆಗೆದುಕೊಳ್ಳಲು ಹಕ್ಕಿಲ್ಲದ ಎರಡನೇ ದರ್ಜೆಯ ಪ್ರಜೆಯಾಗಿ ನೋಡುವುದು. ಸಮಾಜದಲ್ಲಿ ಮಹಿಳೆಯು ಒಂದಲ್ಲಾ ಒಂದು ಕಾರಣದಿಂದ ಶೋಷಣೆಗೆ ಒಳಗಾಗುತ್ತಿದ್ದಾರೆ. ಆದರೆ ಅವರ ಮೇಲಿನ ಶೋಷಣೆಯ ಸ್ವರೂಪ ಭಿನ್ನ - ಭಿನ್ನವಾಗಿರುವುದು. ಇಂಥ ಸಂದರ್ಭದಲ್ಲಿ ಬುಡಕಟ್ಟು ಸಮುದಾಯದ ಮಹಿಳೆಯರ ಮೇಲಿನ ಶೋಷಣೆಯ ಸ್ವರೂಪವೇ ಭಿನ್ನವಾಗಿರುವುದು.

### ಕುಟುಂಬ

ಕುಟುಂಬವು ಒಂದು ಬಹುಮುಖ್ಯ ಸಾಮಾಜಿಕ ಸಂಸ್ಥೆಯಾಗಿದ್ದು, ಆಯಾ ಸಮಾಜದ ಸಾಮಾಜಿಕ ಸಮತೋಲನ ಕಾಪಾಡಿಕೊಂಡು ಹೋಗುವಲ್ಲಿ ಬಹುಮುಖ್ಯ ಪಾತ್ರವಹಿಸುವುದು. ಕುಟುಂಬದ ಮೂಲಕವೇ ಒಬ್ಬ ವ್ಯಕ್ತಿ ತನ್ನ ವ್ಯಕ್ತಿತ್ವ ವಿಕಾಸಕ್ಕೆ ಬೇಕಾಗುವ ಎಲ್ಲಾ ಗುಣಲಕ್ಷಣಗಳಲ್ಲಿ, ವ್ಯಕ್ತಿಯ ಕಲಿಕೆಯಲ್ಲಿ ಕುಟುಂಬದ ಪಾತ್ರ ಬಹು ಮುಖ್ಯವಾಗಿರುವುದು. ಕುಟುಂಬವು ಒಬ್ಬ ವ್ಯಕ್ತಿಯನ್ನು ಸಾಮಾಜಿಕ ವ್ಯಕ್ತಿಯನ್ನಾಗಿ ಮಾರ್ಪಡಿಸುತ್ತದೆ. ಹೀಗಾಗಿ ಸಾಮಾಜಿಕ ರೂಢಿಗತ ಸಂಪ್ರದಾಯ ಆಚರಣೆಗಳು ಸ್ತ್ರೀ ಮತ್ತು ಪುರುಷರಿಗೆ ವಿಭಿನ್ನವಾದ ಕಾರ್ಯಗಳನ್ನು ಕರ್ತವ್ಯಗಳನ್ನು ನಿರ್ದೇಶಿಸುವುದು. "ಸ್ತ್ರೀಯು ಕೇವಲ ಸ್ತ್ರೀಯಾತ್ಮಕ ಗುಣಗಳನ್ನು ಮೈಗೂಡಿಸಿಕೊಳ್ಳುವಂತೆ ಸಮಾಜವು ನೈಜ ಮಹಿಳೆಯನ್ನು ಬಳಕೆಯ

ವಸ್ತುವಿನಂತೆ ಸೃಜಿಸುತ್ತದೆ. ಸಹಜ ಸ್ವಾಭಾವಿಕ ಮಹಿಳೆಯಾಗದೆ ಅಸ್ವಾಭಾವಿಕ ಪ್ರಾಣಿಯಂತೆ ಸಮಾಜ ಆಕೆಯನ್ನು ರೂಪಿಸಿದೆ''[೩] ಎಂದು ಸಿಮೋನ ದಿ ಬೋವಾರವರ ಅಭಿಪ್ರಾಯವಾಗಿದೆ. ಮಹಿಳೆಗೆ ಕೇವಲ ಸ್ತ್ರೀಯಾತ್ಮಕ ಗುಣಗಳು ಅಂದರೆ ಸೌಮ್ಯತೆಯ ಗುಣ, ಸಹನತೆಯ ಭಾವ, ದಯೆ, ಕರುಣೆ, ಮುಂತಾದವುಗಳು ಹೊಂದಿರಬೇಕು. ಪುರುಷ ಧೈರ್ಯ, ಸಾಹಸ, ಪ್ರಕ್ರಿಯೆಯಲ್ಲಿ ತೊಡಗುವಂತಹ ಗುಣಗಳನ್ನು ಅವರಿಬ್ಬರಲ್ಲಿ ಬೆಳೆಸುವುದರ ಮೂಲಕ ಸಮಾಜವು ಕುಟುಂಬಕ್ಕೆ ನೀಡಿದ ನಿರ್ದೇಶನವನ್ನು ವ್ಯಕ್ತಿಗಳು ಅನ್ವಯಿಸುತ್ತಾ ಹೋಗುವರು. ಈಗ ಹರಣಶಿಕಾರಿ ಸಮುದಾಯದ ಕುಟುಂಬ ವ್ಯವಸ್ಥೆಯನ್ನು ನೋಡಿದಾಗ ಅದು ಸಹ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೊಂದಿದೆ. ಅಲ್ಲಿ ಮಹಿಳೆಯರು ಪುರುಷರ ನಿರ್ದೇಶಿಸಿದ ಕಟ್ಟುಪಾಡುಗಳನ್ನು ಪಾಲಿಸಿ ಜೀವನ ನೆಡೆಸಬೇಕು. ಅದನ್ನೇ ಮಹಿಳೆಯರು ತಮ್ಮ ಜೀವನದಲ್ಲಿ ಅಂತರ್ಗತವಾಗಿಸಿಕೊಂಡಿದ್ದಾರೆ.

ಹರಣ ಶಿಕಾರಿ ಸಮುದಾಯದ ಕುಟುಂಬವು ಪುರುಷ ಪ್ರಧಾನತೆಯನ್ನು ಹೊಂದಿದೆ. ಕುಟುಂಬದಲ್ಲಿ ಮನೆಯ ಯಜಮಾನ ಪುರುಷನೇ ಆಗಿರುವನು. ಇಲ್ಲಿ ಮಹಿಳೆಯರ ಪಾತ್ರ ಕೇವಲ ನಾಲ್ಕು ಗೋಡೆಯ ಒಳಗೆ ಮಾತ್ರ ಸೀಮಿತವಾಗಿರುವುದು ಆದರೆ ಕುಟುಂಬದ ನಿರ್ಣಯಗಳಲ್ಲಿ ಪುರುಷನ ನಿರ್ಧಾರವೇ ಅಂತಿಮವಾಗಿರುವುದು. ಮಕ್ಕಳ ಲಾಲನೆ, ಪಾಲನೆ ವಯೋವೃದ್ಧರ ಆರೈಕೆ, ಮುಂತಾದ ಮನೆಕೆಲಸಗಳಲ್ಲಿ ಮಹಿಳೆಯರು ತೊಡಗುವರು. ಆದರೂ ಕೂಡಾ ಅವಳ ಸ್ವಂತ ವ್ಯಕ್ತಿತ್ವಕ್ಕೆ ಯಾವುದೇ ಬೆಲೆಯಿಲ್ಲ. ಕುಟುಂಬದ ಸಾಧ್ಯತೆ ಮತ್ತು ಬಾಧ್ಯತೆಗಳಿಗೆ ಹೆಣ್ಣು ಕಾರಣ. ಸಮುದಾಯದ ಎಲ್ಲಾ ನಿಯಮಾವಳಿಗೆ ಆಕೆ ಒಳಪಡಬೇಕು. ಹರಣ ಶಿಕಾರಿಗಳಲ್ಲಿ ಪುರುಷಾಧಿಪತ್ಯವನ್ನು ಧಾರ್ಮಿಕ ನಿಯಮ ಎಂದೆ ಒಪ್ಪಿಕೊಂಡಿರುವ ಮನಸ್ಥಿತಿ ಸಮುದಾಯದ ಬಹುತೇಕ ಮಹಿಳೆಯಲ್ಲಿ ಕಂಡುಬರುವುದು.

ಹರಣಶಿಕಾರಿ ಸಮುದಾಯದ ಕೌಟುಂಬಿಕ ಅಂತಸ್ತು

| ಕುಟುಂಬದ ಗಾತ್ರ | ಅವೃತ್ತಿ ಸಂಖ್ಯೆ | ಶೇಕಡಾ ಪ್ರಮಾಣ |
|---|---|---|
| ಅವಿಭಕ್ತ ಕುಟುಂಬ | ೧೬ | ೨೬,೬೭ |
| ಅವಿಭಕ್ತ ಕುಟುಂಬ | ೪೪ | ೭೩.೩೩ |
| ಒಟ್ಟು | ೬೦ | ೧೬೦ |

ಈ ಮೇಲಿನ ಕೋಷ್ಟಕದ ಪ್ರಕಾರ ಹರಣ ಶಿಕಾರಿ ಸಮುದಾಯದಲ್ಲಿ ಅವಿಭಕ್ತ ಕುಟುಂಬಗಳಿಗಿಂತ ವಿಭಕ್ತ ಕುಟುಂಬಗಳು ಅಧಿಕವಾಗಿದೆ. ವಿಭಕ್ತ ಕುಟುಂಬಗಳು ಹೆಚ್ಚಾಗಿ ಕೌಟುಂಬಿಕ ಕಲಹಗಳಿಂದ ತಪ್ಪಿಸಿಕೊಳ್ಳುವ ಉದ್ದೇಶದಿಂದ ರೂಪಿತಗೊಂಡಿವೆ. ಅವಿಭಕ್ತ ಕುಟುಂಬಗಳಿಗಿಂತ ವಿಭಕ್ತ ಕುಟುಂಬಗಳಲ್ಲಿ ಮಹಿಳೆಯರ ಹೊಣೆ ಅಧಿಕವಾಗಿರುವುದು. ಸಾಂಪ್ರದಾಯಿಕ ನೆಲೆಗಟ್ಟನ್ನು ಕಾಪಾಡಿಕೊಂಡು ಬರುವಲ್ಲಿ ಅವಿಭಕ್ತ ಕುಟುಂಬಗಳ ಪಾತ್ರವೂ ಮುಖ್ಯವಾಗಿರುವುದು. ಇಂದು ಆಧುನೀಕರಣ, ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿ ಅನೇಕ ಕುಟುಂಬಗಳು ವಿಘಟನೆಯ ರೂಪವನ್ನು ಪಡೆದುಕೊಂಡು ವಿಭಕ್ತ ಕುಟುಂಬಗಳಾಗಿ ಪರಿವರ್ತಿತಗೊಂಡಿವೆ. ಸಾಮಾನ್ಯವಾಗಿ ಅಲೆಮಾರಿಯಾದ ಹರಣ ಶಿಕಾರಿ ಸಮುದಾಯ

ಇತ್ತೀಚಿಗೆ ಶಾಶ್ವತವಾಗಿ ಒಂದು ಕಡೆ ನೆಲೆವೂರಲು ಪ್ರಯತ್ನಿಸುತ್ತಿವೆ. ಅಲೆಮಾರಿ ಸಂದರ್ಭದಲ್ಲಿ ದಿಕ್ಕು ದಿಕ್ಕುಗೆ ಚದುರಿದ ಇವರು ಅವಿಭಕ್ತರಾಗಿ ಜೀವಿಸುವುದು ತುಂಬ ಕಡಿಮೆ. ಆದರೆ ನಾಗರಿಕತೆಯ ಪ್ರಭಾವದಿಂದ ಇಂದು ಇವರಲ್ಲಿ ಅವಿಭಕ್ತಕ್ಕಿಂತ ವಿಭಕ್ತ ಕುಟುಂಬಗಳೇ ಹೆಚ್ಚಾಗಿವೆ.

ಅವಿಭಕ್ತ ಕುಟುಂಬಗಳಲ್ಲಿ ಸದಸ್ಯರ ಸಂಖ್ಯೆಯು ಅಧಿಕವಾಗಿದ್ದು, ಮನೆಯ ಪ್ರತಿಯೊಂದು ಕೆಲಸದಲ್ಲಿ ಸಹಭಾಗಿತ್ವದ ಗುಣವು ಕಂಡು ಬರುತ್ತಿತ್ತು. ಇದರಿಂದ ಮಹಿಳೆಯರ ಮೇಲೆ ಇರುವ ಕೆಲಸದ ಹೊಣೆಯಭಾರ ಕಡಿಮೆಯಿರುತ್ತಿತ್ತು ಆದರೆ ವಿಭಕ್ತ ಕುಟುಂಬಗಳಲ್ಲಿ ಮಹಿಳೆಯೇ ಮನೆಯ ಪ್ರತಿಯೊಂದು ಜವಾಬ್ದಾರಿಯಲ್ಲಿ ತೊಡಗಬೇಕು. ಮಕ್ಕಳ ಲಾಲನೆ-ಪಾಲನೆಯಿಂದ ಹಿಡಿದು ವೃದ್ಧರ ಆರೈಕೆ ದುಡಿಮೆಯಲ್ಲಿ ಸಹಬಾಗಿತ್ವ ಎಲ್ಲಾ ರೀತಿಯ ಕೆಲಸದ ಹೊರೆ ಮಹಿಳೆಯರ ಮೇಲೆ ಇರುವುದು. ಇಂಥಹ ಸಂದರ್ಭದಲ್ಲಿ ಮಹಿಳೆಯರು ಮಾನಸಿಕ ಒತ್ತಡಕ್ಕೆ ಒಳಗಾಗುವುದು, ದೈಹಿಕವಾಗಿ ಆಯಾಸಕ್ಕೆ ಒಳಗಾಗುವಳು ವಿಭಕ್ತ ಕುಟುಂಬಗಳಲ್ಲಿ ಹರಣಶಿಕಾರಿ ಮಹಿಳೆಯರು ದಿನವಿಡೀ ದುಡಿಮೆಯಲ್ಲಿ ತೊಡಗಿರುವದನ್ನು ಕಾಣಬಹುದು. ಕ್ಷಾತ್ರಕಾರ್ಯದ ಸಂದರ್ಭದಲ್ಲಿ *ಈ* ಹರಣ ಶಿಕಾರಿ ಸಮುದಾಯದ ಕೌಟುಂಬಿಕ ವ್ಯವಸ್ಥೆಯನ್ನು ಗಮನಸಿದಾಗ ತುಂಬ ಅಸ್ತವ್ಯಸ್ತದ ಬದುಕು ಅವರದಾಗಿದೆ ಎನ್ನುವುದು ಗಮನಿಸಲಾಯಿತು. ಇಲ್ಲಿ ಮಹಿಳೆ ಬೆಳಿಗ್ಗೆ ಸುರ್ಯೋದಯ ಪ್ರಾರಂಭವಾದಾಗಿನಿಂದ ಸುರ್ಯಸ್ತದವರೆಗೆ ಒಂದು ಯಂತ್ರವಾಗಿ ಮಾರ್ಪಡುತ್ತಾಳೆ. ಏಕೆಂದರೆ ಮನೆಯ ಪ್ರತಿಯೊಂದು ಕೆಲಸ ಕಾರ್ಯಗಳನ್ನು ತುಂಬ ಸಹನೆಯಿಂದ ನೆರವೇರಿಸಬೇಕಾಗುತ್ತದೆ. ಪುರುಷನಿಗೆ ಸರಿಸಮನಾಗಿ ದುಡಿದು ಬಂದ ಮಹಿಳೆ ಪುನಃ ಮನೆಯ ಕೆಲಸ ಕಾರ್ಯಗಳಲ್ಲಿ ಭಾಗಿಯಾಗುವಳು. ಹೀಗಾಗಿ *ಈ* ಸಮುದಾಯದ ಮಹಿಳೆಯು ಇತರೆ ಸಮುದಾಯದಾಯದ ಮಹಿಳೆಯರಂತೆ ಕೌಟುಂಬಿಕ ವ್ಯವಸ್ಥೆಯಲ್ಲಿ ಜರ್ಜರಿತವಾಗಿದ್ದಾಳೆ. ಇವಳ ಸಾಮಾಜಿಕ ಬದುಕಿಗೆ ಸಂಬಂಧಿಸಿದ ಕೆಲವು ಛಾಯಾ ಗಮನಿಸಬಹುದು.

### ೩.೨. ವಿವಾಹ

ಜಗತ್ತಿನಾದ್ಯಂತ ಅಸ್ಥಿತ್ವದಲ್ಲಿರುವ ಒಂದು ಸಾಮಾಜಿಕ ಘಟಕ ವಿವಾಹ ಎಂಬುದು ಒಂದು ಸಾಮಾಜಿಕ ಸಂಸ್ಥೆಯಾಗಿದೆ. ಗಂಡು ಮತ್ತು ಹೆಣ್ಣಿನ ನಡುವೆ ವಿವಿಧ ಉದ್ದೇಶಗಳ ಪೂರೈಕೆಗಾಗಿ ಏರ್ಪಟ್ಟ ಒಂದು ಪ್ರಮುಖ ಬಾಂಧವ್ಯವಾಗಿದೆ. ಪುರುಷ ಭೂ ಒಡೆತನದ ಜೊತೆಗೆ ಮಹಿಳೆಯರ ಮೇಲೆ ಹಿಡಿತವನ್ನು ಸಾಧಿಸುವಲ್ಲಿ ವಿವಾಹವನ್ನು ಒಂದು ಅಸ್ತ್ರವಾಗಿ ಬಳಕೆ ಮಾಡಿಕೊಂಡ. ಎಚ್.ಡಿ ಮಜುಂದಾರ್‌ರವರ ಪ್ರಕಾರ ವಿವಾಹವೆಂದರೆ ಸಾಮಾಜಿಕ ಮಾನ್ಯತೆಯನ್ನು ಪಡೆದಿರುವಾದ ಸ್ತ್ರೀ ಪುರುಷರ ಸಂಯೋಗ ವಿವಾಹಕ್ಕೆ ೪ ಉದ್ದೇಶಗಳಿವೆ ಎನ್ನುತ್ತಾರೆ. ಅವುಗಳೆಂದರೆ ೧.ಕುಟುಂಬದ ಸ್ಥಾಪನೆ, ೨.ಲೈಂಗಿಕ ನಿರ್ಬಂಧನೆಗಳನ್ನು ಹೊಂದುವುದು, ೩. ಸಂತಾನೋತ್ಪತ್ತಿ, ೪.ಶಿಶುಗಳ ಪಾಲನೆ ಪೋಷಣೆ."[೪] ವಿವಾಹದ ಬಂಧನಕ್ಕೆ ಒಳಗಾಗುವ ಪುರುಷ ಮತ್ತು ಮಹಿಳೆಯು ಕುಟುಂಬದ ಸ್ವಾಮ್ಯತೆಯನ್ನು ಕಾಪಾಡುವಲ್ಲಿ ಮತ್ತು ಸಮಾನತೆಯಿಂದ ಬಾಳುವ ಮೂಲಕ ಸಮಾಜದ ಒಂದು ಮುಖ್ಯ ಘಟಕವಾನ ವಿವಾಹ ಎಂಬ ಬಂಧನಕ್ಕೆ ಒಳಗಾಗುತ್ತಾರೆ.

ವಿವಾಹ ಸಂಸ್ಥೆಯು ತನ್ನ ಮುಖ್ಯ ಗುರಿಯನ್ನು ಸಾಧಿಸುವುದರೊಂದಿಗೆ ಮಹಿಳೆಗೆ ಒಂದು ಸಾಮಾಜಿಕ ಚೌಕಟ್ಟನ್ನು ಒದಗಿಸುತ್ತದೆ. ಸಮಾಜವು ಮಹಿಳೆಗೆ ವಿವಾಹವು ಅನಿವಾರ್ಯತೆ ಎಂಬ ಮನೋಸ್ಥಿತಿಯನ್ನು ಹೊಂದುವಂತೆ ಮಾಡಿದೆ. ವಿವಾಹದ ನಂತರ ಸಾಮಾಜಿಕವಾಗಿಯೇ ಮಹಿಳೆಯು ತಾನು ಹುಟ್ಟಿ ಬೆಳೆದ ಮನೆಯನ್ನು ತ್ಯಾಜಿಸಿ ಗಂಡನ ಮನೆಗೆ ಸೇರುವಳು. ಅದೇ ರೀತಿ ಹರಣ ಶಿಕಾರಿ ಸಮುದಾಯಗಳಲ್ಲು ಮಹಿಳೆಯರು ವಿವಾಹದ ನಂತರ ಗಂಡನ ಮನೆಯಲ್ಲಿ ಇರಬೇಕು. ಅಪರಿಚಿತ ಹೊಸ ವಾತಾರವಣಕ್ಕೆ ಹೊಂದಿಕೊಂಡು ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸುವುದು ಪ್ರತಿಯೊಬ್ಬ ಮಹಿಳೆಯರ ಕರ್ತವ್ಯ ಎಂಬಂತೆ ಸಾಮಾಜಿಕ ವ್ಯವಸ್ಥೆಯು ಈ ರೀತಿಯ ನಿರ್ಬಂಧನವನ್ನು ಹೇರಿದೆ.

ಹರಣ ಶಿಕಾರಿ ಸಮುದಾಯವು ಧಾರ್ಮಿಕ ಅಂಶಗಳ ಮೂಲಕ ಕಟ್ಟಿಕೊಟ್ಟಿರುವ ಅನೇಕ ಮೌಲ್ಯಧಾರಿತ ಮಿಥ್ಯೆಗಳನ್ನು ಮಹಿಳೆಯರ ಮೇಲೆ ಹೇರುವುದರಿಂದ ಮಹಿಳೆಯರ ಸ್ವಂತ ಅಸ್ತಿತ್ವಕ್ಕೆ ಯಾವುದೇ ಬೆಲೆಯಿಲ್ಲದಂತಾಗುವುದು ಮಹಿಳೆಯ ಎಲ್ಲಾ ಕ್ರಿಯಾ ಚಟುವಟಿಕೆಗಳು ಪುರುಷನ ನಿರ್ಧಾರದ ಮೂಲಕವೆ ಪೂರ್ಣಗೊಳ್ಳುವಂತೆ ಪುರಷಾಧಿಪತ್ಯವನ್ನು ಹೊಂದಿರುವುದು. "ವಿವಾಹದ ತಂತ್ರದಲ್ಲಿ ಹೆಣ್ಣಿನ ಸಂತಾನದ ಹಕ್ಕು ಗಂಡಿನ ಸಂಪಾದನೆಯಾಗಿ ಬಿಡುತ್ತದೆ. ಹೆಣ್ಣಿನ ಪಾಲಿಗೆ ಮಗುವನ್ನು ಹೆರುವ ಹೊರುವ, ಹಾಲುಣಿಸುವ, ಪೋಷಿಸುವ ಶ್ರಮ ಬಾಧ್ಯತೆಗಳಷ್ಟೆ ಉಳಿದುಕೊಳ್ಳುತ್ತವೆ. ವಿವಾಹದ ನಿಯಮಾವಳಿಗಳು, ಮನೆತನದ ಕಲ್ಪನೆಗಳು, ಪತಿ-ಪತ್ನಿಯರ ಸಂಬಂಧ ಸ್ವರೂಪಗಳು ಹಾಗೂ ಇವುಗಳನ್ನು ಮೀರಿ ಬದುಕಲೆತ್ನಿಸುವವರಿಗೆ ಕಾಯ್ದಿರಿಸಲಾದ ಸಾಮಾಜಿಕ ಶಿಕ್ಷೆ ವಿಧಾನಗಳನ್ನು ಗಮನಿಸಿದರೆ ವಿವಾಹದ ಮೂಲಕ ಪುರುಷನು ಮಹಿಳೆಯರ ಲೈಂಗಿಕ ಬದುಕನ್ನು ನಿಯಂತ್ರಣಕ್ಕೆ ತೆಗೆದುಕೊಳ್ಳುವ ಕುತಂತ್ರವೂ ಚೆನ್ನಾಗಿ ಮನವರಿಕೆಯಾಗುತ್ತವೆ."[೫] ಮಹಿಳೆಯು ಮಗುವನ್ನು ಹೆರುವ ಮತ್ತು ಪೋಷಿಸುವ ಪ್ರಕ್ರಿಯೆಲ್ಲಿ ತೊಡಗಿದರೂ ಕೂಡ ಅದರ ಅಸ್ಥಿತ್ವದ ಗುರುತಿಸುವಿಕೆ ಮಾತ್ರ ತಂದೆಯದು.

ಹರಣ ಶಿಕಾರಿ ಸಮುದಾಯದಲ್ಲಿ ಮಹಿಳೆಯನ್ನು ತಾಯಿಯಾಗಿ, ಹೆಂಡತಿಯಾಗಿ ಮುಂತಾದ ಪಾತ್ರದ ಮಾದರಿಯಲ್ಲಿ ಸ್ವೀಕರಿಸುವುದು. ಇದಕ್ಕೆ ಅನುಗುಣವಾಗಿ ಆಕೆಯ ಕ್ರಿಯಾ ಚಟುವಟಿಕೆ ಮೇಲೆ ಅನೇಕ ನಿರ್ಬಂಧಗಳನ್ನು ಹೇರುವುದರ ಮೂಲಕ ಕುಟುಂಬವೆಂಬ ಸೀಮಿತ ವಲಯಕ್ಕೆ ಮೀಸಲಿರಿಸಿದೆ. ಹರಣ ಶಿಕಾರಿ ಸಮುದಾಯದಲ್ಲಿ ವಿವಾಹ ಎನ್ನುವಂತ ಬಂಧನವು ಹೆಣ್ಣಿಗೂ ಮತ್ತು ಗಂಡಿಗೂ ಅತೀ ಮುಖ್ಯವಾದ ಘಟ್ಟವಾಗಿದೆ. ವಿವಾಹದ ಸಂದರ್ಭದಲ್ಲಿ ವರದಕ್ಷಿಣೆ ತೆಗೆದುಕೊಳ್ಳುವ ಪದ್ಧತಿ ಇವರಲ್ಲಿ ಇಲ್ಲ. ಆದರೆ ಕನ್ಯಾಶುಲ್ಕ ತೆರು ಕೊಡುವ ಪದ್ಧತಿಯಿರುವುದು ಹರಣ ಶಿಕಾರಿ ಸಮುದಾಯದಲ್ಲಿ ಹೆಣ್ಣಿನ ವಿವಾಹಕ್ಕೆ ಸಂಬಂಧಿಸಿದಂತೆ ಸಂಗಾತಿಯ ಆಯ್ಕೆಗೆ ಅವಕಾಶಗಳಿರುವುದಿಲ್ಲ. ಇಲ್ಲಿ ಕುಟುಂಬಗಳ ಪಾತ್ರವೇ ಮುಖ್ಯವಾಗಿರುವುದು ಕುಟುಂಬದ ಸದಸ್ಯರು ಕೂಡಿ ಇಚ್ಛಿಸುವ ಹುಡುಗನ ಜೊತೆಯಲ್ಲಿಯೇ, ಆಕೆ ಮದುವೆಯಾಗಬೇಕು. ಹೆಣ್ಣು ಋತುಮತಿಯಾದ ಕೆಲವೇ ದಿನಗಳಲ್ಲಿ ಆಕೆಯ ವಿವಾಹದ ಬಗ್ಗೆ ಪ್ರಸ್ತಾಪಗಳು ಮೂಡಿಬರುವುದುಂಟು. ಆದ್ದರಿಂದ ಹರಣ ಶಿಕಾರಿ ಸಮುದಾಯದಲ್ಲಿ ಶೇ ೮೦% ರಷ್ಟು

ಹೆಣ್ಣು ಮಕ್ಕಳು ಬಾಲ್ಯ ವಿವಾಹಕ್ಕೆ ಒಳಗಾಗಿದ್ದಾರೆ. ಹರಣ ಶಿಕಾರಿ ಸಮುದಾಯದಲ್ಲಿ ಗಮನಿಸಬಹುದಾದ ಇನ್ನೊಂದು ಮುಖ್ಯವಾದ ಸಂಗತಿಯೆಂದರೆ, ವಿವಾಹದ ವಿಷಯಕ್ಕೆ ಸಂಬಂಧಿಸಿದಂತೆ ಹೆಣ್ಣಿನ ಮನೆಯವರು ವರನ ಅನ್ವೇಷಣೆಯಲ್ಲಿ ತೊಡಗಕೂಡದು. ಪರ್ಯಾಯವಾಗಿ ವರನ ಕಡೆಯವರೇ ಕನ್ಯೆಯನ್ನು ಹುಡುಕಿಕೊಂಡು ಬಂದು ತಮ್ಮ ಒಪ್ಪಿಗೆಯನ್ನು ನೀಡಿದಾಗ ಮಾತ್ರ ಅಲ್ಲಿ ವಿವಾಹದ ಮುಂದಿನ ವಿಷಯಗಳು ಚರ್ಚಿತವಾಗುವುದು. ಇಂಥಹ ಪದ್ಧತಿಯ ಆಚರಣೆಗೆ ಕಾರಣವೇನು ಎಂದು ಪ್ರಶ್ನಿಸಿದಾಗ ಅಲ್ಲಿ ಮೂಡಿ ಬಂದ ಉತ್ತರ "ನಾವು ಹೆಣ್ಣು ಹೆತ್ತವರು ಗಂಡಿನ ಮನೆಯವರ ಹತ್ತಿರ ಹೋಗಿ ಮದುವೆ ಬಗ್ಗೆ ಮಾತಾಡಿದರ ಅದನ್ನ ಕೀಳಾಗಿ ಕಾಣ್ತಾರೆ ಮತ್ತು ಮದುವೆ ನಂತರ ಹೆಣ್ಣಿನ ಬಗ್ಗೆ ಏನಾದರೂ ಆಪಾದನೆ ಬಂದರೂ ಅದಕ್ಕೆ ನಿಮ್ಮ ತಂದೆ ತಾಯಿಗೆ ನೀನು ಭಾರ ಎನ್ನುವ ಕಾರಣದಿಂದ ನಮ್ಮ ಮನೆಗೆ ವರವನ್ನು ಕೇಳಿಕೊಂಡು ಬಂದಿದ್ದರು ಎಂಬ ಆಪಾದನೆಗೆ ಒಳಗಾಗುತ್ತಾಳೆ."[೬]

ಮದುವೆಯ ವಿಷಯದಲ್ಲಿ ಕನ್ಯೆಯನ್ನು ಹುಡುಕಿಕೊಂಡು ವರನ ಕಡೆಯವರು ಹೋಗುವುದನ್ನು ಗಮನಿಸಿದಾಗ ಸಮಾಜದಲ್ಲಿ ಅದನ್ನು ಇನ್ನೊಂದು ರೀತಿಯಲ್ಲೇ ಗ್ರಹಿಸುತ್ತಾರೆ. ಇದು ಒಂದು ಒಳ್ಳೆಯ ಪದ್ಧತಿ. ಇಲ್ಲಿ ಹೆಣ್ಣಿಗೆ ಒಳ್ಳೆಯ ಸ್ಥಾನವನ್ನು ಕಲ್ಪಿಸಲಾಗಿದೆ ಎಂದು ಪೂರ್ವಾಗ್ರಹಿತವಾಗಿ ಯೋಚನೆ ಮಾಡುತ್ತಾರೆ. ಆದರೆ ಇಲ್ಲಿಯು ಕೂಡಾ ಪುರುಷಾಧಿಪತ್ಯಯವ ಛಾಯೆಯನ್ನು ಕಾಣಬಹುದು. ಹೆಣ್ಣು ಹೆತ್ತವರು ಎಷ್ಟಾದರೂ ಗಂಡು ಹೆತ್ತವರಿಗಿಂತ ಕೀಳು ಎಂಬ ಭಾವನೆಯು ಇಲ್ಲಿ ಸೂಕ್ಷ್ಮವಾಗಿ ಗೋಚರಿಸುತ್ತವೆ. ವಿವಾಹ ಕುರಿತ ಛಾಯಾ ಚಿತ್ರವನ್ನು ಗಮನಿಸಬಹುದು.

### ೩.೩. ತೆರ ಕನ್ಯಾಶುಲ್ಕ ಅಥವಾ ವಧು ದಕ್ಷಿಣೆ

ಹರಣ ಶಿಕಾರಿ ಸಮುದಾಯದಲ್ಲಿ ವರದಕ್ಷಿಣೆಯ ಬದಲಾಗಿ ತೆರ ಕೊಡುವ ಪದ್ಧತಿಯಿರುವುದು ಕಂಡು ಬರುತ್ತದೆ. ಲಕ್ಕಿ ಪೃಥ್ವಿರಾಜ್ ಮತ್ತು ಎ.ಪಿ.ಶಿಕಾರಿ ರಾಮರವರ ಅಭಿಪ್ರಾಯದಂತೆ ಪಾರ್ಧಿಗಳಲ್ಲಿ ಹೆಣ್ಣಿಗೆ ಸಮಾನವಾದ ಸ್ಥಾನಮಾನವನ್ನು ಕೊಡಲಾಗುತ್ತದೆ. ಹೆಣ್ಣು ಹುಟ್ಟಿದರೇ ಗಂಡು ಹುಟ್ಟಿದಷ್ಟೇ ಸಂತೋಷವನ್ನು ಪಡುತ್ತಾರೆ. ಹೆಣ್ಣನ್ನು ಕೀಳಾಗಿ ನೋಡುವುದಿಲ್ಲ"[೭] ಆದರೆ *ಈ* ಸಮುದಾಯವು ಇಂದು ಆಧುನೀಕರಣದ ಪ್ರಭಾವಕ್ಕೆ ಒಳಗಾಗಿ ತೆರಕೊಡುವ ಪದ್ಧತಿಯು ವರದಕ್ಷಿಣೆಯ ರೂಪ ಪಡೆದುಕೊಂಡು ಬೆಳೆಯತೊಡಗಿದೆ. ತೆರಕೊಡುವುದು ಒಂದು ಸಾಂಪ್ರದಾಯಿಕ ಆಚರಣೆ ಎನ್ನುವಂತ ನೆಲೆಯಲ್ಲೇ ಪರಿಭಾವಿಸಿಕೊಂಡು ಹೋಗುತ್ತಿದ್ದಾರೆ. ಇಂಥಹ ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣನ್ನು ಒಂದು ಹೊರೆ ಎಂತಲೇ ತಿಳಿದಿರುವ ತಾಯಿ-ತಂದೆಯರು ಬಹುತೇಕರಿದ್ದಾರೆ. ತೆರು ಕೊಡುವ ರೂಪದಲ್ಲೇ ಗಂಡಿಗೆ ಬೇಕಾಗುವಂಥಹ ಎಲ್ಲಾ ರೀತಿಯ ವಸ್ತುಗಳನ್ನು ಪೂರೈಸುವುದು ಹೆಣ್ಣಿನ ಕಡೆಯವರ ಜವಾಬ್ದಾರಿಯಾಗಿರುತ್ತದೆ. ಅಲ್ಲದೇ ತೆರ ಕೊಡುವ ಶುಲ್ಕ ಮೊದಲು ೨೦-೫೦ ರೂ ಇತ್ತು. ಅದು ಇಂದು ೧೦.೦೦೦ರೂ ವರೆಗೆ ವಿಸ್ತರಿಸಿಕೊಂಡಿದೆ. ಇಂಥಹ ಪರಿಸ್ಥಿತಿಯಲ್ಲಿ ಹೆಣ್ಣಿನ ಹುಟ್ಟು ಅವರಿಗೆ ಒಂದು ಭಾರ ಎಂತಲೇ ಭಾವಿಸುತ್ತಾರೆ. ಇದೆಲ್ಲಾ ಬೆಳವಣಿಗೆಯನ್ನು ನೋಡಿದಾಗ ಹೆಣ್ಣು ಹುಟ್ಟಿದರೆ

ಗಂಡು ಹುಟ್ಟಿದಷ್ಟೇ ಸಂತೋಷಪಡುತ್ತಾರೆ ಎಂಬ ಹಿಂದಿನ ಧೋರಣೆ ಪ್ರಸ್ತುತ ಸಂದರ್ಭದಲ್ಲಿ ಇಲ್ಲದಂತಾಗಿದೆ.

ಹರಣ ಶಿಕಾರಿ ಸಮುದಾಯಗಳಂತೆ ಅನೇಕ ಬುಡಕಟ್ಟು ಸಮುದಾಯಗಳಲ್ಲಿ ತೆರ ನೀಡುವ ಪದ್ಧತಿ ಇಂದು ವರದಕ್ಷಿಣೆಯ ರೂಪ ಪಡೆದು ಅದು ಹೆಮ್ಮರವಾಗಿ ಬೆಳೆಯತೊಡಗಿದೆ. ವರದಕ್ಷಿಣೆಯಂತಹ ಸಾಮಾಜಿಕ ಪಿಡುಗು ಮಹಿಳೆಯರ ಬದುಕನ್ನು ಕತ್ತಲೆಯ ಕೋಣೆಗೆ ತಳ್ಳುತ್ತಿದೆ. “ವರದಕ್ಷಿಣೆಯ ಕಾರಣದಿಂದಾಗಿ ಅನೇಕ ಮಹಿಳೆಯರ ಜೀವನ ಕೊಲೆ ಅಥವಾ ಆತ್ಮಹತ್ಯೆಗಳಿಂದ ಅಸಹಜ ಅಮಾನವಿಯ ಅಂತ್ಯದಲ್ಲಿ ಪರ್ಯಾವಸನಗೊಳ್ಳುತ್ತದೆ”[೮] ವರದಕ್ಷಿಣೆ ನಿಷೇದ ಕಾಯ್ದೆಯು ೧೯೬೧ರಲ್ಲಿ ಜಾರಿಗೆ ಬಂದಿತು. ಈ ಕಾಯ್ದೆಯು ೧೯೮೪ ಮತ್ತು ೧೯೮೬ರಲ್ಲಿ ತಿದ್ದುಪಡಿಗೆ ಒಳಗಾಯಿತು. ವರದಕ್ಷಿಣೆ ನಿಷೇದ ಕಾಯ್ದೆಯ ಅಡಿಯಲ್ಲಿ ಬರುವ ಕ್ರಮಗಳನ್ನು ಅತೀ ಬಿಗಿಯಾಗಿ ಜಾರಿಗೆಗೊಳಿಸಿದರೂ ಕೂಡಾ ವರದಕ್ಷಿಣೆಯಂಥಹ ಪಿಡುಗು ಸಮಾಜದಿಂದ ಕಿತ್ತೆಸೆಯಲು ಸಾಧ್ಯವಾಗುತ್ತಿಲ್ಲ.

ಹರಣ ಶಿಕಾರಿ ಸಮುದಾಯದಲ್ಲಿ ತೆರ ಕನ್ಯಾಶುಲ್ಕ ತೆಗೆದುಕೊಳ್ಳುವ ಬದಲಿಗೆ ವರದಕ್ಷಿಣೆ ತೆಗೆದುಕೊಂಡಿರುವ ಬಗ್ಗೆ ಸಮುದಾಯದ ಪಂಚಾಯಿತಿ ಮುಖ್ಯಸ್ಥರಿಗೆ ತಿಳಿದರೇ ೫ ರೂ ದಂಡವನ್ನು ಅವರಿಗೆ ವಿಧಿಸುತ್ತಾರೆ. ಇದರಿಂದ ಅವರಿಗೆ ಸಮಾಜದ ಎದುರು ಅವಮಾನ ಮಾಡಿದಂತಾಗುವುದು. ಆದರೆ ಇಂಥಹ ಕ್ರಮಗಳು ಇಂದು ಕಡಿಮೆ ಮಟ್ಟದಲ್ಲಿ ಕಂಡುಬರುತ್ತವೆ. ವರದಕ್ಷಿಣೆಯ ತೆಗೆದುಕೊಳ್ಳುವಂತಹ ಕ್ರಮಕ್ಕೆ ಕೇವಲ ೫ ರೂ ದಂಡವನ್ನು ವಿಧಿಸಿದರೇ ಅದು ಯಾವುದೇ ರೀತಿಯ ಮೌಲ್ಯವನ್ನು ಹೊಂದಿರುವುದಿಲ್ಲ ಆದ್ದರಿಂದ ಅದನ್ನು ಸಹಜವಾಗಿಯೇ ಜನರು ಸ್ವೀಕರಿಸುತ್ತಾರೆ.

ತಮ್ಮ ಪಾರಂಪರಿಕ ಪದ್ಧತಿಯನ್ನು ಪಾಲಿಸಿಕೊಂಡು ಬರುತ್ತಿರುವ ಹರಣ ಶಿಕಾರಿ ಸಮುದಾಯ ಇಂದು ನಾಗರಿಕ ಸಮಾಜದಲ್ಲಿ ಬೆರತು, ತನ್ನ ಪ್ರತಿಯೊಂದು ಆಚರಣಾ ಕ್ರಮದಲ್ಲಿ ಬದಲಾವಣೆಯನ್ನು ಕಾಣಲಾರಂಭಿಸಿದೆ. ವರದಕ್ಷಿಣೆ ಎಂಬ ದುಷ್ಟ ಪದ್ಧತಿ ಇವರಲ್ಲೂ ಸಹ ಇತ್ತೀಚಿಗೆ ತುಂಬ ಗಂಭೀರವಾಗಿ ಬೆಳೆಯತೊಡಗಿದೆ.

### ೩.೪. ಬಹುಪತ್ನಿತ್ವ

ಹರಣ ಶಿಕಾರಿ ಸಮುದಾಯದಲ್ಲಿ ಬಹುಪತ್ನಿತ್ವ ಆಚರಣೆ ಪದ್ಧತಿಗಳು ಕಂಡುಬರುವುದು. ಒಬ್ಬ ಪುರುಷ ಹಲವು ಮಹಿಳೆಯರೊಡನೆ ವೈವಾಹಿಕ ಸಂಬಂಧವನ್ನು ಬೆಳೆಸಿಕೊಳ್ಳುವುದನ್ನೇ ಬಹುಪತ್ನಿತ್ವ ಎಂದು ಕರೆಯುತ್ತಾರೆ. ಸಮಾಜದಲ್ಲಿ ಏಕ ಸಂಗಾತಿ ವಿವಾಹಕ್ಕೆ ಮನ್ನಣೆ ನೀಡಿದರೂ ಕೂಡಾ ಪ್ರಾಚೀನ ಕಾಲಘಟ್ಟದಿಂದಲೂ ನಡೆದುಬಂದ ಬಹುಪತ್ನಿತ್ವ, ದ್ವಿಪತ್ನಿತ್ವ ವಿವಾಹಕ್ಕೆ ಇಂದಿಗೂ ಮನ್ನಣೆ ಇದೆ. ಅದರಲ್ಲೂ ಬುಡಕಟ್ಟು ಸಮುದಾಯಗಳಲ್ಲಿ ಆದಿಮ ಹಂತದಿಂದಲೂ ಬಹುಪತ್ನಿತ್ವ ಆಚರಣೆಗಳು ಕಂಡು ಬಂದಿವೆ. ಆದರೂ ಧಾರ್ಮಿಕತೆಯ ಹೆಸರಿನಲ್ಲಿ ಹೆಣ್ಣಿನ ಶೀಲ ಪಾವಿತ್ರ್ಯದಂತಹ ಪರಿಕಲ್ಪನೆಯನ್ನು ಮಹಿಳೆಯರಿಗೆ ಮೀಸಲಿರಿಸುವುದರ ಮೂಲಕ ಅವರ ಮೇಲೆ ನಿರ್ಬಂಧವನ್ನು ಹೇರಲಾಯಿತು. ಇದರಿಂದ ಮಹಿಳೆಯರು ಏಕ ಸಂಗಾತಿಯ ವಿವಾಹಕ್ಕೆ ಅಧಿಕ ಪ್ರಾಶಸ್ತ್ಯವನ್ನು ನೀಡಲಾಯಿತು. ಈ ನಿರ್ಬಂಧಕ್ಕೆ

ಪುರುಷರು ಒಳಗಾಗಲಿಲ್ಲ, ಹರಣ ಶಿಕಾರಿ ಸಮುದಾಯದಲ್ಲಿ ಒಂದೇ ಕಾಲಕ್ಕೆ ಅಂದರೆ ಮೊದಲನೇ ಹೆಂಡತಿ ಜೀವಂತವಿರುವಾಗಲೇ ಎರಡನೇ ಮದುವೆಯನ್ನು ಮಾಡಿಕೊಳ್ಳಬಹುದು. ಎರಡನೇ ಮದುವೆಗೆ ಮೊದಲನೇ ಹೆಂಡತಿಯು ಬಂಜೆಯಾಗಿದ್ದರೆ, ಯಾವುದಾದರು ಅನಾರೋಗ್ಯಕರ ಸಮಸ್ಯೆಯಿಂದ ಬಳಲುತ್ತಿದ್ದರೆ ಮುಂತಾದ ಕಾರಣಗಳನ್ನೊಡುವುದರ ಮೂಲಕ ಎರಡನೆಯ ಮದುವೆಯನ್ನು ಮಾಡಿಕೊಳ್ಳಬಹುದು. ಸ್ತ್ರೀ-ಪುರುಷ ಸಮಾನತೆಯ ಮತ್ತು ಸ್ವಾತಂತ್ರ್ಯಗಳನ್ನು ಕುರಿತಂತೆ ದ್ವಿಮುಕ ಮೌಲ್ಯಗಳನ್ನೇ ಪ್ರತಿಪಾದಿಸುತ್ತಾ ಬಂದಿರುವ ಈ ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷನಿಗೆ ಜೀವನದಲ್ಲಿ ಒಂದೇ ಬಾರಿ ವಿವಾಹ ಎಂಬ ನಿಯಮ ಹಿಂದೆಯೇ ಅನ್ವಯಿಸಿರಲಿಲ್ಲ, ಇಂದಿಗೂ ಅನ್ವಯಿಸುತಿಲ್ಲ"[೯] ಬಹುಪತ್ನಿತ್ವ ಮತ್ತು ದ್ವಿಪತ್ನಿತ್ವ ವಿವಾಹಕ್ಕೆ ಒಳಗಾದ ಮಹಿಳೆಯರು ಮಾನಸಿಕವಾಗಿ ನೆಮ್ಮದಿಯನ್ನು ಕಳೆದುಕೊಂಡಿರುತ್ತಾರೆ. ಮೊದಲನೇ ಹೆಂಡತಿ ಮತ್ತು ಎರಡನೇಯ ಹೆಂಡತಿಯ ನಡುವೆ ಆಗುವಂತಹ ಕೌಟುಂಬಿಕ ಕಲಹಗಳಾಗಲಿ ಯಾವುದೇ ವಿಷಯಕ್ಕೆ ಸಂಬಂಧಿಸಿದ ವಿಷಯವಾಗಲಿ, ಗಂಡನ ಮೇಲಿನ ಅಧಿಕಾರದ ಪ್ರಶ್ನೆಯಾಗಲೀ ಹೀಗೆ ಮುಂತಾದ ವಿಷಯಗಳ ಕಲಹಗಳಿಗೆ ಕಾರಣವಾಗುವ ಅಂಶಗಳು ಆ ಇಬ್ಬರ ಮಹಿಳೆಯರ ಮಾನಸಿಕ ನೆಮ್ಮದಿಯನ್ನು ಕೆಡಿಸುತ್ತದೆ. ಇದಕ್ಕೆ ಮೂಲ ಕಾರಣೀಭೂತನಾದ ಪುರುಷ ಈ ಸಂದರ್ಭಕ್ಕೆ ಒಬ್ಬ ಮೂಕ ಪ್ರೇಷಕನ್ನಾಗಿ ನಿಂತು ಬಿಡುತ್ತಾನೆ. ಆದರೆ ಇಂಥಹ ಒಂದು ವ್ಯವಸ್ಥೆಯಿಂದ ಸಮಸ್ಯೆಗೆ ಒಳಗಾಗುವವಳು ಮಹಿಳೆಯೇ. ಹರಣ ಶಿಕಾರಿ ಸಮುದಾಯದಲ್ಲಿ ದ್ವಿಪತ್ನಿತ್ವಕ್ಕೆ ಒಳಗಾದ ಕುಟುಂಬಗಳು ದಿನ ನಿತ್ಯವು ಕೌಟುಂಬಿಕ ಕಲಹಗಳುಂಟಾಗಿರುವುದನ್ನು ನೋಡಬಹುದು. ಇಂಥಹ ಕಲಹಗಳು ಕೌಟುಂಬಿಕ ವಿಘಟನೆಗೂ ಕಾರಣವಾಗಿರುವುವು.

### ೩.೫. ವಿಧವಾ ವಿವಾಹ

ಸಾಮಾನ್ಯವಾಗಿ ಬುಡಕಟ್ಟು ಸಮುದಾಯಗಳಲ್ಲಿ ವಿಧವಾ ಪುನರ್ ವಿವಾಹಕ್ಕೆ ಮನ್ನಣೆ ಇರುವುದು ತುಂಬ ಕಡಿಮೆ. ಈ ರೀತಿಯ ಅವಕಾಶಗಳಿದ್ದರೂ ಕೂಡ ಸಮಾಜದಲ್ಲಿ ಅವರನ್ನು ಬೇರೆಯೇ ದೃಷ್ಟಿಯಿಂದ ನೋಡುತ್ತಾರೆ. ಹರಣ ಶಿಕಾರಿ ಸಮುದಾಯಗಳಲ್ಲೂ ಕೂಡ ವಿಧವಾ ವಿವಾಹಕ್ಕೆ ಅವಕಾಶವಿರುವುದು ಕಂಡು ಬರುತ್ತದೆ. ಆದರೆ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಇಂಥಹ ವಿವಾಹಗಳು ಕುಟುಂಬದ ಒಳಗೆ ನಡೆಯುತ್ತವೆ. ಅಂದರೆ ವಿಧವೆಯ ಗಂಡನ ಅಣ್ಣ ಅಥವಾ ತಮ್ಮನಿಗೆ ತೊಟ್ಟು ಮದುವೆ ಮಾಡುತ್ತಾರೆ. ಹರಣ ಶಿಕಾರಿ ಸಮುದಾಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಬಾಲ್ಯವಿವಾಹಕ್ಕೆ ಒಳಗಾಗಿದ್ದು ಅನಿರೀಕ್ಷಿತ ಕಾಲಘಟ್ಟದಲ್ಲಿ ಗಂಡನು ತೀರಿಹೋದ ನಂತರ ಅವಳಿಗೆ ಮತ್ತೊಮ್ಮೆ ಮರುವಿಧವಾ ವಿವಾಹಕ್ಕೆ ಅವಕಾಶವನ್ನು ನೀಡುವರು. ಇದಕ್ಕೆ ಮೊದಲು ಮಹಿಳೆಯ ಒಪ್ಪಿಗೆಯನ್ನು ಕೇಳುವರು, "ಬಾಲ್ಯ ಕಾಲದಲ್ಲಿ ಮಾತ್ರವಲ್ಲದೆ ಸ್ತ್ರೀ ತನ್ನ ಪ್ರೌಢವಯಸ್ಸಿನಲ್ಲಿ ಕೊನೆಗೆ ವೃದ್ಧಾಪ್ಯದಲ್ಲಿ ಕೂಡ ಗಂಡನನ್ನು ಕಳೆದುಕೊಂಡಾಗ ಅಷ್ಟೇ ಅಸಹಾಯಕತೆಗೆ ಒಳಗಾಗುತ್ತಾಳೆ. ಇಂಥಹ ವಿಧವೆಯರ ಸಂದರ್ಭದಲ್ಲಿ ಮರುವಿವಾಹದ ಆಲೋಚನೆ ಸಾಮಾನ್ಯವಾಗಿ ಪ್ರಸ್ತುತಗೊಳ್ಳುವುದೇ ಇಲ್ಲ. ಅಂತಹ ಸಂದರ್ಭಗಳನ್ನು ಗಮನದಲ್ಲಿಟ್ಟುಕೊಂಡು ನೋಡುವುದಾದರೆ ವಿಧಾವ ಸಮಸ್ಯೆಯು ಆಳದಲ್ಲಿ

ಪಿತೃಪ್ರಧಾನ ಸಮಾಜದ ಅದು ಮಹಿಳೆಯಲ್ಲಿ ಮೂಲಭೂತ ಸಮಸ್ಯೆಯೇ ಹೊರತು ಕೇವಲ ವಿವಾಹ ಕೇಂದ್ರಿತವಾದುದಲ್ಲ. ವಾಸ್ತವದಲ್ಲಿ ನೋಡಿದರೆ ಈ ಸಮಸ್ಯೆ ಮಹಿಳೆಯ ಸಮಾಜೋ ಆರ್ಥಿಕ ಸ್ಥಿತಿಯೊಂದಿಗೆ ಸಂಬಂಧಿಸಿದ್ದು, ಮಹಿಳೆಯ ಸ್ಥಿತಿಗತಿ ಸುಧಾರಣೆಲ್ಲಿ ಆಕೆಯ ಸಮಾಜೋ ಆರ್ಥಿಕ ಸಶಕ್ತಗೊಳ್ಳದಿದ್ದರೆ ವಿಧವೆಯರ ಸಮಸ್ಯೆ ಹಾಗೆ ಉಳಿಯುವುದು."[೧೦]

ಹರಣ ಶಿಕಾರಿ ಸಮುದಾಯಗಳಲ್ಲಿ ವಿಧವಾ ಪುನರ್ ವಿವಾಹಕ್ಕೆ ಅವಕಾಶವಿದ್ದರೂ ಕೂಡಾ ಮಹಿಳೆಗೆ ಮೊದಲನೇ ಹಂತದಲ್ಲಿದ್ದ ಪುನರ್ ಸಮ್ಮಾನಗಳು ಗೌರವ, ಆಥಿತ್ಯಗಳು ಪ್ರಾಪ್ತವಾಗುವುದಿಲ್ಲ. ಅವಳನ್ನು ಮೈಲಿಗೆಯಂತಲ್ಲೇ ಕೀಳಾಗಿ ಪರಿಭಾವಿಸಲಾಗುವುದು. ಸಮುದಾಯದ ಕೆಲವೊಂದು ಆಚರಣೆಗಳಲ್ಲಿ ಇವರಿಗೆ ಸಮಾನವಾದ ಹಕ್ಕು ನೀಡಿರುವುದಿಲ್ಲ. ಅವರು ಅಂಥಹ ಆಚರಣೆಗಳಲ್ಲಿ ಭಾಗವಹಿಸದೆ, ದೂರನೆ ನಿಂತು ನೋಡಬಹುದು. "ವಿಧವಾ ವಿವಾಹ ತೀರ ಶ್ವಚತ್ತಾಗಿ ನಡೆದರೂ ಅವರು ಯಾವ ಮಂಗಳ ಕಾರ್ಯಗಳಲ್ಲೂ ಭಾಗವಹಿಸಬಾರದೆಂಬ ನಿರ್ಬಂಧವಿದೆ. ಕತ್ತಲಕೋಣೆಯಲ್ಲಿ ವಿಧವೆಗೆ ತಾಳಿಕಟ್ಟುವ ಮೂಲಕ ನಡೆಯುವ "ವಿಧವಾ ವಿವಾಹಗಳನ್ನು ಉಡುಕಿ ಎಂದು ಕರೆದು ಅವರನ್ನು ಅಸಹಜವಾಗಿ ಕಾಣಲಾಗುವುದು. ಆದರೆ ಪುರುಷರಿಗೆ ಮಾತ್ರ ಇಂಥ ಯಾವ ನಿರ್ಬಂಧವು ಇಲ್ಲ" "ವೈಧವ್ಯದ ಆಚರಣೆಯಲ್ಲಿ ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕವಾದ ನಿಯಮಗಳ ಪರಿಪಾಲನೆ ಮಾಡುವುದನ್ನು ಪ್ರತಿಯೊಂದು ಸಮಾಜದಲ್ಲೂ ಕಾಣಬಹುದು. ವೈಧವ್ಯದ ಆಚರಣೆಗಳಲ್ಲಿ ಪುರುಷರಿಗೆ ಯಾವುದೇ ರೀತಿಯ ನಿರ್ಬಂಧನೆಗಳಾಗಲಿ ಕಟ್ಟುಪಾಡುಗಳಾಗಲಿ ಇರುವುದಿಲ್ಲ, ಆದರೆ ಮಹಿಳೆಯ ಸಂದರ್ಭಕ್ಕೆ ಬಂದಾಗ ಅಲ್ಲಿ ಮಹಿಳೆಯರು ಆಚರಣೆಗಳಡಿಯಲ್ಲಿ ಅಸಹಜವಾದ ಬದುಕನ್ನು ಸಾಗಿಸುತ್ತಿದ್ದಾರೆ. ಹೆಣ್ಣು ಹುಟ್ಟುವುದಕ್ಕಿಂತ ಮಣ್ಣಾಗಿ ಹುಟ್ಟುವುದು ಮಣ್ಣಿನ ಮೇಲಿನ ಮರವಾಗಿ ಹುಟ್ಟಿ ನಾಲ್ಕು ಜನರಿಗೆ ನೆರಳಾಗಿ ಬಾಳುವುದು ಎಷ್ಟು ಚೆನ್ನ ಎಂದು ತನ್ನ ಬದುಕಿನ ಕುರಿತು ಜಿಗುಪ್ಸೆಯ ಭಾವನೆಯನ್ನು ತಳೆಯುವಳು.

### ೩.೬. ವಿವಾಹ ವಿಚ್ಛೇದನ

ಭಾರತದಂತಹ ಸಾಂಪ್ರದಾಯಿಕ ಸಮಾಜದಲ್ಲಿ ವಿವಾಹಕ್ಕೆ ಪ್ರಮುಖವಾದ ಸ್ಥಾನವನ್ನು ಕಲ್ಪಿಸಲಾಗಿದೆ. ವಿವಾಹದಂಥಹ ಪವಿತ್ರವಾದ ಬಂಧನದಲ್ಲಿ ಸ್ತ್ರೀ ಪುರುಷರು ಬಂದಿತವಾದರೇ ಅಲ್ಲಿಂದ ಮುಂದೆ ಅವರ ಹೊಸ ಕೌಟುಂಬಿಕ ಜೀವನಕ್ಕೆ ನಾಂದಿಯಾಗುವುದು. ಇಂತಹ ವೈವಾಹಿಕ ಸಂದರ್ಭದಲ್ಲಿ ಸ್ತ್ರೀ ಮತ್ತು ಪುರುಷರ ನಡುವೆ ಅನೇಕ ವಿಷಯಕ್ಕೆ ಸಂಬಂಧಿಸಿದಂತೆ ಕಲಹಗಳು ಅನುಬಂಧಗಳು ಬೆಳೆದು ಮುಂದೆ ಒಬ್ಬರನೊಬ್ಬರು ಕೂಡಿ ಬಾಳಲು ಸಾಧ್ಯವಿಲ್ಲವೆಂಬ ಮನೋಸ್ಥಿತಿಯಲ್ಲಿ ದಾಂಪತ್ಯ ಜೀವನವು ವಿವಾಹ ವಿಚ್ಛೇದನದ ಕ್ರಿಯೆಗೆ ಒಳಗಾಗುವುದು. ಈ ರೀತಿಯ ವಿವಾಹ ವಿಚ್ಛೇದನೆಯಂಥಹ ಬೆಳವಣಿಗೆ ಎಲ್ಲಾ ಸಮುದಾಯಗಳಲ್ಲಿ ಕಂಡುಬರುವುದು.

ಹರಣ ಶಿಕಾರಿ ಸಮುದಾಯದಲ್ಲಿ ವಿವಾಹ ವಿಚ್ಛೇದನಕ್ಕೆ ಅವಕಾಶವಿರುವುದು. ಆದರೆ ಈ ಸಮುದಾಯದ ಕುಟುಂಬಗಳಲ್ಲಿ ಅತೀ ಕಡಿಮೆ ಪ್ರಮಾಣದ ಜನರು ವಿವಾಹ ವಿಚ್ಛೇದನಕ್ಕೆ ಒಳಗಾಗುವವರು.

ಏಕೆಂದರೆ ಸಮುದಾಯದ ಸಾಮಾಜಿಕ ಪರಿಸರವೇ ಇದಕ್ಕೆ ಕಾರಣ. ಸಮುದಾಯದಲ್ಲಿ ವಿಚ್ಛೇದಿತ ಪುರುಷನನ್ನು ಯಾವ ಸಂದರ್ಭದಲ್ಲಿದ್ದರೂ ಪುನಃ ಮದುವೆ ಮಾಡಿಕೊಳ್ಳುವರು. ಆದರೆ ವಿಚ್ಛೇದಿತ ಮಹಿಳೆಗೆ ಯಾವುದೇ ರೀತಿಯ ಬೆಲೆ ಇರುವುದಿಲ್ಲ. ವಿವಾಹ ವಿಚ್ಛೇದನಕ್ಕೆ ಒಳಗಾದ ಸ್ತ್ರೀ ಮತ್ತು ಪುರುಷರಲ್ಲಿ ಮಹಿಳೆ ಹೆಚ್ಚು ಕಷ್ಟಕ್ಕೆ ಒಳಗಾಗುವಳು. ಅಲ್ಲದೇ ಕುಟುಂಬದಲ್ಲಿ ಅನೇಕ ರೀತಿಯಿಂದಲ್ಲೂ ಗಂಡನಿಂದ ಚಿತ್ರಹಿಂಸೆಯನ್ನು ಅನುಭವಿಸುತ್ತಿದ್ದರೂ ಕೂಡಾ ಮಹಿಳೆ ವಿವಾಹ ವಿಚ್ಛೇದನದಂತಹಕ್ಕೆ ಹೋಗುವುದಿಲ. ಏಕೆಂದರೆ ಅದು ಮಹಿಳೆಯರಿಗೆ ಮಾನ ಮರ್ಯಾದೆ ಪ್ರಶ್ನೆಯಾಗಿರುವುದು. ಅಲ್ಲದೇ ಪತಿಯೇ ಪರ ದೈವ ಎಂದು ನಂಬಿಕೊಂಡಿರುವ ಮಹಿಳೆಯರು ಪತಿಯ ವಿರುದ್ಧ ಯಾವುದೇ ವಿರೋಧ ಧೋರಣೆಯಲ್ಲಿ ತೊಡಗಲು ಇಷ್ಟ ಪಡುವುದಿಲ್ಲ. ಎಷ್ಟೇ ಕಷ್ಟ ದುಃಖಗಳು ಬಂದರೂ ಅವಮಾನವನ್ನು ಸಹಿಸಿಕೊಂಡು ಕುಟುಂಬದ ಹೊರೆಯನ್ನು ಸಾಗಿಸುತ್ತಾ ಮುಂದೆ ಸಾಗುವವಳಾಗಿದ್ದಾಳೆ.

**೩.೭. ಆರೋಗ್ಯದ ಸ್ಥಿತಿಗತಿಗಳು**

ಪಿತೃ ಪ್ರಧಾನವಾದ ಸಮಾಜದಲ್ಲಿ ಹೆಣ್ಣು ಅನೇಕ ಕಾರಣಗಳಿಂದ ಎಲ್ಲಾ ಕ್ಷೇತ್ರಗಳಲ್ಲೂ ತಾರತಮ್ಯಕ್ಕೆ ಒಳಗಾಗುವಳು. ಕುಟುಂಬದಲ್ಲಿಯೇ ಮೊದಲು ತಾರತಮ್ಯದ ನೆಲೆಗಳು ಹುಟ್ಟಿಕೊಳ್ಳುವುದು. ಪುರುಷನಿಗಿಂತ ಸರಿಸಮಾನವಾದ ಕೆಲಸದಲ್ಲಿ ತೊಡಗಿದ ಹರಣ ಶಿಕಾರಿ ಮಹಿಳೆಯರು ಅನೇಕ ಆರೋಗ್ಯಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಹರಣ ಶಿಕಾರಿ ಸಮುದಾಯದ ಮಹಿಳೆಯರಿಗೆ ಆಹಾರ ಹಂಚಿಕೆಯ ಬಗ್ಗೆ ಕೇಳಿದಾಗ ತಿಳಿದು ಬಂದ ಮಾಹಿತಿ ಪ್ರಕಾರ ಗಂಡು ಮಕ್ಕಳು ಆಹಾರವನ್ನು ತೆಗೆದುಕೊಳ್ಳುವವರೆಗೂ ಹೆಣ್ಣು ಮಕ್ಕಳು ಆಹಾರ ಸೇವನೆ ಮಾಡುವಂತಿಲ್ಲ, ಎಲ್ಲಾರೂ ಊಟ ಮಾಡಿದ ನಂತರ ಮಹಿಳೆಯರು ಊಟಕ್ಕೆ ಕುಳಿತುಕೊಳ್ಳುವುದರಿಂದ ಆಹಾರವು ಸರಿಯಾದ ಪ್ರಮಾಣದಲ್ಲಿ ದೊರಕದೇ ಇರುವುದು. ಇದರಿಂದ ಅನೇಕ ಮಹಿಳೆಯರು ರಕ್ತಹೀನತೆಗೆ ಒಳಗಾಗಿದ್ದಾರೆ. ಆಹಾರ ಸೇವನೆಯಲ್ಲೂ ಹೆಣ್ಣಿಗೆ ತಾರತಮ್ಯವಾಗುತ್ತಿರುವುದನ್ನು ಕಾಣಬಹುದು. ಈ ರಕ್ತಹೀನತೆಯ ಕಾರಣದಿಂದಾಗಿ ಅನೇಕ ಮಹಿಳೆಯರು ಗರ್ಭಾವಸ್ಥೆಯ ಸಂದರ್ಭದಲ್ಲಿ ತೊಂದರೆಗೆ ಒಳಗಾಗಿರುವುದನ್ನು ಕಾಣಬಹುದು.

ಹರಣ ಶಿಕಾರಿ ಸಮುದಾಯದಲ್ಲಿ ಗರ್ಭಿಣಿ ಮಹಿಳೆಯರ ಬಗ್ಗೆ ವಿಶೇಷವಾದ ಆಚರಣೆಗಳನ್ನು ಕಾಣಬಹುದು. ಇಂದಿನ ಆಧುನೀಕರಣದ ಯುಗದಲ್ಲೂ ಹರಣ ಶಿಕಾರಿ ಮಹಿಳೆಯರು ಆಸ್ಪತ್ರೆಗೆ ಹೋಗುವುದಿಲ್ಲ, ಗರ್ಭಿಣಿ ಮಹಿಳೆಗೆ ಪ್ರಸವ ಮಾಡಿಕೊಳ್ಳಲಿಕ್ಕೆ ಮನೆಯ ಹೊರಗಡೆ ಪ್ರತ್ಯೇಕವಾದ ಗುಡಿಸಲನ್ನು ನಿರ್ಮಿಸುವರು. ಪ್ರಸವ ಸಂದರ್ಭದಲ್ಲಿ ಮಹಿಳೆಯನ್ನು ಮುಟ್ಟುವುದು ಮೈಲಿಗೆ ಎಂದು ನಂಬುತ್ತಾರೆ. ಆದ್ದರಿಂದ ಗರ್ಭಿಣಿ ಮಹಿಳೆ ತನ್ನ ಪ್ರಸವವನ್ನು ತಾನೇ ಮಾಡಿಕೊಳ್ಳಬೇಕು. ಮಗುಹುಟ್ಟಿದ ನಂತರ ತನ್ನ ಕರಳುಬಳ್ಳಿಯನ್ನು ಅಲ್ಲಿಯೇ ಸ್ಥಳೀಯಲಿದ್ದ ಗಾಜಿನ ಚೂರು, ಬ್ಲೇಡು, ಕತ್ತರಿಯಿಂದಲೇ ಕತ್ತರಿಸುಳು. ನಂತರ ಅವರ ಆರೈಕೆಯನ್ನು ಅವಳೇ ಮಾಡಿಕೊಳ್ಳಬೇಕು. ಒಂದು ವೇಳೆ ಮಗು ಹುಟ್ಟುವುದರಲ್ಲಿ ಏನಾದರೂ ತೊಂದರೆಯಾದರೆ ಆ ಮಹಿಳೆ ಅಥವಾ ಆಕೆಯ ಗಂಡ ವ್ಯಭಿಚಾರದಲ್ಲಿ

ತೊಡಗಿದ್ದಾರೆ ಎಂತಲು ನಂಬಲಾಗುತ್ತದೆ. ಇಂಥಹ ಒಂದು ಸಂದರ್ಭದಲ್ಲಿ ಅನೇಕ ಶಿಶುಮರಣಗಳು ಉಂಟಾಗಿರುವುದನ್ನು ಕಾಣಬಹುದು, ಪ್ರಸವದ ನಂತರ ಮಹಿಳೆಯು ತಾನೇ ತನ್ನನ್ನು ಮತ್ತು ಮಗುವನ್ನು ಸ್ವಚ್ಛಗೊಳಿಸಬೇಕು. ಅವಳನ್ನು ಯಾರು ಮುಟ್ಟುವಂತಿಲ್ಲ, ಅವಳನ್ನು ಒಂದು ವೇಳೆ ಮನೆಯ ಒಳಗೆ ಕರೆದುಕೊಂಡು ಹೋದರೆ ಆ ಮನೆ ಮೈಲಿಗೆ ಮನೆಯಾಗುವುದು, ಅಲ್ಲದೇ ದೇವಿಯ ಕೋಪಕ್ಕೆ ಗುರಿಯಾಗುವವರು. ಎಲ್ಲ ಕಾರ್ಯಗಳಿಗೆ ಅಶುಭವಾಗುವುದು ಎಂಬ ನಂಬಿಕೆಯಿರುವುದು. ನಿಸರ್ಗದತ್ತವಾಗಿಯೇ ಹೆಣ್ಣಿನ ಜೈವಿಕತೆಗೆ ಸಂಬಂಧಿಸಿದಂತ ಸಂತಾನೋತ್ಪತ್ತಿಯ ಕ್ರಿಯೆಯು ಒಂದು ನಿಸರ್ಗದತ್ತವಾದ ಅಂಶವಾಗಿದ್ದರೂ ಕೂಡಾ ಅದನ್ನು ಮೈಲಿಗೆ ಎಂತಲ್ಲೇ ಆಚರಣೆ ಮಾಡುವರು ಮಗುವಿನ ಜನನದ ನಂತರ ಬಾಣಂತಿ ಮಹಿಳೆಯನ್ನು ಯಾರು ಮುಟ್ಟುವುದಿಲ್ಲ. ಐದು ದಿನಗಳವರೆಗೆ ಈ ಕ್ರಿಯೆ ಮುಂದುವರೆಯುವುದು. ಬಾಣಂತಿಗೆ ಈ ಸಮಯದಲ್ಲಿ ಪೌಷ್ಠಿಕಾಂಶವುಳ್ಳ ಆಹಾರ ಸಿಗುವುದಿಲ್ಲ. ಅವಳಿಗೆ ಮಗುವಿನ ಜನನದ ಮೊದಲನೆದಿನ ಒಣಗಿದ ರೊಟ್ಟಿ, ತುಪ್ಪ, ಬೆಲ್ಲವನ್ನು ಕೊಡುತ್ತಾರೆ. ಈ ರೀತಿಯ ಆಹಾರದ ಹಂಚಿಕೆಯ ನೀಡುವಿಕೆಯಿಂದ ಸರಿಯಾದ ಪ್ರಮಾಣದ ಪೌಷ್ಠಿಕಾಂಶ ಮಹಿಳೆಯರಿಗೆ ದೊರೆಯುವುದಿಲ್ಲ, ಮಗುವಿನ ಜನನದ ಸಂದರ್ಭದಲ್ಲಿ ಉಂಟಾದ ರಕ್ತಹೀನತೆಯಿಂದಾಗಿ ತುಂಬಾ ಅಶಕ್ತರಾಗಿರುತ್ತಾರೆ. ಆರ್ಥಿಕವಾಗಿ ತುಂಬ ಆಸಕ್ತರಾಗಿರುವ ಹರಣಿ ಶಿಕಾರಿ ಮಹಿಳೆಯರಿಗೆ ಗರ್ಭಿಣಿ, ಹಾಗೂ ಬಾಣಂತಿ ಸಮಯದಲ್ಲಿ ಒಳ್ಳೆಯ ಪೌಷ್ಠಿಕವಾದ ಆಹಾರವಿಲ್ಲದ ಕೊರತೆಯನ್ನು ಅನುಭವಿಸುವರು. ಇದರಿಂದ ಹುಟ್ಟುವ ಮಕ್ಕಳು ಸಹ ಆಸಕ್ತರಾಗಿ, ಕೆಲವೊಮ್ಮೆ ರೋಗಿಷ್ಟರಾಗಿ ಹುಟ್ಟುವ ಸಾಧ್ಯತೆಗಳಿವೆ ಈ ಮಹಿಳೆಯರನ್ನು ಕುರಿತು ಅಧ್ಯಯನವದಲ್ಲಿ ತೊಡಗಿದಾಗ ಅನೇಕ ರೀತಿಯ ಸಮಸ್ಯೆಗಳು ಗೋಚರಿಸಿದವು. ಪುರುಷಶಾಹಿ ವ್ಯವಸ್ಥೆಯ ಅಡಿಯಲ್ಲಿ ಬದುಕನ್ನು ನಿರ್ವಹಿಸುವ ಇವರು ತಾವು ಗರ್ಭಾವಸ್ಥೆಯಲ್ಲಿದ್ದರು ಅನೇಕ ರೀತಿಯ ಕೆಲಸ ಕಾರ್ಯದಲ್ಲಿ ತೊಡಗುವರು. ಇಂತಹ ವೇಳೆಯಲ್ಲೂ ಈ ಮಹಿಳೆಯರಿಗೆ ವಿರಾಮವಿಲ್ಲ. ಮೈಗಳ್ಳರು, ಕುಡುಕ, ಕಳ್ಳಕಾರರಿಂದ ಒಳಗೊಂಡಿದ ಈ ಸಮುದಾಯದ ಕೆಲವು ಪುರುಷರು ಮನೆಯ ಕಡೆ, ಮಕ್ಕಳ ಲಾಲನೆ ಪಾಲನೆ ಅವರ ಆರೋಗ್ಯದ ಕಡೆ ಯಾವುದೇ ಕಾಳಜಿವಹಿಸುವಲ್ಲಿ ವಿಫಲರಾಗಿರುತ್ತಾರೆ. ಪ್ರಜನನದ ಸಂದರ್ಭದಲ್ಲಿ ಮಹಿಳೆಯು ಮಗುವಿನ ಕರಳುಬಳ್ಳಿಯನ್ನು ಕತ್ತರಿಸಲು ಬಳಸುವ ಗಾಜಿನ ಚೂರು, ಬ್ಲೇಡು ಮುಂತಾದ ವಸ್ತುಗಳಿಂದ ಪ್ರಜನನದ ವಲಯದ ಸೊಂಕಿಗೆ ಕಾರಣವಾಗುವ ಸಾಧ್ಯತೆಗಳು ಹರಣ ಶಿಕಾರಿ ಮಹಿಳೆಯರಲ್ಲಿ ಹೆಚ್ಚಾಗಿರುವುದು. ಹೀಗೆ ಅನೇಕ ಸಂಪ್ರದಾಯ, ಆಚರಣೆ, ಮೂಢನಂಬಿಕೆಗಳು ಹರಣ ಶಿಕಾರಿ ಸಮುದಾಯದಲ್ಲಿ ಈಗಲೂ ಆಚರಣೆಯಲ್ಲಿದೆ. ಅವು ಮಹಿಳೆಯರ ಆರೋಗ್ಯದ ಮೇಲೆ ಅತಿ ಹೆಚ್ಚು ಪ್ರಭಾವ ಬೀರುವುದು. ಅಲ್ಲದೇ ಬಾಣಂತಿಯ, ಮಹಿಳೆಯ ನೆರಳು ಕೂಡಾ ಪುರುಷನ ಮೇಲೆ ಬೀಳಬಾರದು, ಅದು ಅವನ ಏಳಿಗೆಗೆ ಶ್ರೇಯಸ್ಸಲ್ಲ ಎಂಬ ನಂಬಿಕೆಗಳಿವೆ. ಸಂತಾನೋತ್ಪತ್ತಿ ಕ್ರಿಯೆಯು ಮಹಿಳೆಗೆ ಒಂದು ನಿಸರ್ಗದತ್ತವಾದ ಕೊಡುಗೆಯಾಗಿದೆ. ಅದು ಮಹಿಳೆಗೆ ಇರುವಂಥ ಒಂದು ಅದ್ಭುತ ವರದಾನ ಎಂದು ಹೇಳಬಹುದು. ಈ ರೀತಿಯ ಕ್ರಿಯೆಯನ್ನು ಆಚರಣೆ, ಸಂಪ್ರದಾಯ,

ಮೂಢನಂಬಿಕೆಯ ಹಿನ್ನೆಲೆಯಲ್ಲಿ ಮಹಿಳೆಯರು ಆರೋಗ್ಯಕರ ಸಮಸ್ಯೆಗೆ ಒಳಗಾಗುತ್ತಿದ್ದಾರೆ. ಇನ್ನೊಂದು ಕಡೆ ಸಮುದಾಯದ ಕಟ್ಟುಪಾಡುಗಳ ಸಂಕೋಲೆಯನ್ನು ಮುರಿದು ಹೊರಬರಲು ಪ್ರಯತ್ನಿಸಿದರೇ ಅವರನ್ನು ಧರ್ಮಬಾಹಿರವೆಂದು ಪರಿಗಣಿಸಬಹುದು ಎಂಬ ಮನೋಧೋರಣೆಗೆ ಶೋಷಣೆಗೆ ಒಳಗಾಗುತ್ತಿದ್ದಾರೆ. ಇದರಲ್ಲಿ ಪುರುಷಪರವಾದ ಒಂದು ರಾಜಕಾರಣದ ಛಾಯೆಯನ್ನು ಕಾಣಬಹುದು. "ಮಹಿಳೆಯು ಈ ತನ್ನ ಶಕ್ತಿ ಕೇಂದ್ರದ ಬಗೆಗೆ ಹೆಮ್ಮೆ, ಅಭಿಮಾನಗಳನ್ನು ಬೆಳೆಸಿಕೊಂಡು ಇದೇ ತನ್ನ ಅಸ್ಮಿತೆಯ ಮುಖ್ಯ ಕುರುಹು ಎಂದು ಗುರುತಿಸಿಕೊಳ್ಳುವುದರಿಂದ ತನ್ನ ಬಲಕುಗ್ಗುವುದರಿಂದ ಅನಿಸಿಕೆಯೊಂದಿಗೆ, ಸಮಾಜದಲ್ಲಿ ಮಹಿಳೆಯ ದೈಹಿಕ ಪ್ರಕ್ರಿಯೆಗಳನ್ನು ಅಸಹ್ಯಗಳೆಂಬಂತೆ ಕಾಣುವುದು ಇಂತಹ ಒಂದು ಪ್ರಯತ್ನ, ಮುಟ್ಟು ಹೆರಿಗೆಗಳು, ಮೈಲಿಗೆ ಸೂತಕಗಳಾಗುತ್ತವೆ"[೧೨] ಇಂಥಹ ಆಚರಣೆಯಲ್ಲಿ ಮಹಿಳೆಯರಿಗೆ ದೊರೆಯಬೇಕಾದ ಸಂಪೂರ್ಣವಾದ ಪೌಷ್ಠಿಕ ಆಹಾರವು ಸಿಗುವುದಿಲ್ಲ. ಈ ಸಂದರ್ಭದಲ್ಲಿ ಅನೇಕ ಹರಣ ಶಿಕಾರಿ ಮಹಿಳೆಯರು ನ್ಯೂನತೆಗೆ ಒಳಗಾಗಿದ್ದಾರೆ. ಅದು ಅವರನ್ನು ದೈಹಿಕವಾಗಿ ಅಲ್ಲದೇ ಮಾನಸಿಕವಾಗಿ ಕುಂದು ಹೋಗುವಂತೆ ಮಾಡುವುದು.

ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ದೊರೆತ ಮಾಹಿತಿ ಪ್ರಕಾರ, ಹರಣ ಶಿಕಾರಿ ಸಮುದಾಯ ಕೇವಲ ಮೇಲ್ವರ್ಗದ, ಶಿಕ್ಷಿತ ಕುಟುಂಬಗಳಲ್ಲಿ ಮಾತ್ರ ಗರ್ಭಿಣಿ ಮಹಿಳೆಯರನ್ನು ಹೆರಿಗೆ ಸಂದರ್ಭದಲ್ಲಿ ಆಸ್ಪತ್ರೆಗಳಿಗೆ ಕರೆದುಕೊಂಡು ಹೋಗಿರುವುದನ್ನು ಕಾಣಬಹುದು. ಅದು ಬೆರೆಳೆಣಿಕೆಯಷ್ಟು ಮಾತ್ರ. ಹರಣಶಿಕಾರಿ ಸಮುದಾಯಗಳಲ್ಲಿ ಪಿತೃಪ್ರಧಾನತೆಗೆ ಪ್ರಮುಖ ಬೆಲೆಯಿರುವುದರಿಂದ ವಿವಾಹದ ನಂತರ ಗಂಡು ಮಗುವಿನ ಜನನದ ನಿರೀಕ್ಷೆಯನ್ನು ಇಟ್ಟುಕೊಂಡಿರುತ್ತಾರೆ. ಅಂದರೆ ಗಂಡು ಮಗುವಿನ ಮೂಲಕ ವಂಶಾವಳಿಯನ್ನು ಗುರುತಿಸುತ್ತಾರೆ. ಹೀಗಾಗಿ ಗಂಡು ಮಗುವಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಒಬ್ಬ ಹರಣ ಶಿಕಾರಿ ಮಹಿಳೆಯು ಗಂಡು ಮಗುವಿಗೆ ಜನ್ಮ ನೀಡುವವರೆಗೂ ಮಕ್ಕಳನ್ನು ಹೇರುತ್ತಲೇ ಇರಬೇಕು. ಹೀಗಾಗಿ ಹರಣ ಶಿಕಾರಿ ಕುಟುಂಬಗಳಲ್ಲಿ ಮಕ್ಕಳ ಸಂಖ್ಯೆ ಐದು ಸಂಖ್ಯೆಯನ್ನು ಮೀರಿರುವುದನ್ನು ಕಾಣಬಹುದು. ಮಕ್ಕಳನ್ನು ಹೇರುವ ಸಂದರ್ಭದಲ್ಲಿ ಅವಳಿಗೆ ಏನೇ ಕಷ್ಟವಾದರೂ ಕೂಡಾ ಗಂಡು ಮಗುವಿನ ಹಂಬಲವನ್ನು ವ್ಯಕ್ತಪಡಿಸುತ್ತಾರೆ. ಅಲ್ಲದೇ ಪದೇ ಪದೇ ಮಕ್ಕಳನ್ನು ಹೇರುವುದರಿಂದ ಅಧಿಕವಾದ ರಕ್ತಹಿನತೆಯಂತಹ ನ್ಯೂನತೆಯಿಂದ ತಾಯಿಯು ಮರಣವನ್ನು ಹೊಂದಬಹುದು. ಇಂಥ ಸಂದರ್ಭದಲ್ಲಿ ಅನೇಕ ಹರಣ ಶಿಕಾರಿ ಮಹಿಳೆಯರು ದೈಹಿಕವಾಗಿ ಅನೇಕ ತೊಂದರೆಗೆ ಒಳಗಾಗಿ ಸಾವನ್ನಪ್ಪಿದ ಉದಾಹರಣೆಗಳುಂಟು. ಅಲ್ಲದೇ ಹರಣ ಶಿಕಾರಿ ಸಮುದಾಯಗಳಲ್ಲಿ ಮಕ್ಕಳು ಹೆಚ್ಚಾಗಲಿಕ್ಕೆ ಬಾಲ್ಯ ವಿವಾಹಗಳು ಸಹ ಕಾರಣವಾಗಿವೆ.

| ವಿವಾಹದ ಅಂತಸ್ತು | ಆವೃತ್ತಿ ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|
| ಬಾಲ್ಯ ವಿವಾಹ | ೪೫ | ೭೫ |
| ವಯಸ್ಕರ ವಿವಾಹ | ೧೫ | ೨೫ |
| ಒಟ್ಟು | ೬೦ | ೧೦೦ |

ಈ ಮೇಲಿನ ಕೋಷ್ಟಕದ ಹಿನ್ನಲೆಯಲ್ಲಿ

ಬಾಲ್ಯ ವಿವಾಹದ ಸಂಖ್ಯೆಯು ಅಧಿಕವಾಗಿದ್ದು, ವಿವಾಹ ನಂತರ ಹುಡಗಿಯರು ಗರ್ಭಧರಿಸಿದಾಗ ಅನೇಕ ರೀತಿಯ ದೈಹಿಕ ಮತ್ತು ಮಾನಸಿಕ ತೊಳಲಾಟಕ್ಕೆ ಒಳಗಾಗುತ್ತಾರೆ. ಚಿಕ್ಕವಯಸ್ಸಿನಲ್ಲೇ ವಿವಾಹವಾಗುವುದು, ಲೈಂಗಿಕ ಕಿರುಕುಳ, ಕೌಟುಂಬಿಕ ದೌರ್ಜನ್ಯ, ವರದಕ್ಷಿಣೆ, ಹಿಂಸೆ, ಮಕ್ಕಳಾಗದಿರುವುದು, ಗಂಡು ಮಗು ಆಗದಿರುವುದು ಮೊದಲಾದ ಮಾನಸಿಕ ಹಿಂಸೆ ಪ್ರಜನನದ ವಯಸ್ಸಿನಲ್ಲಿ ಮಹಿಳೆ ಸಾವಿಗೀಡಾಗಲು ಕಾರಣವಾಗುತ್ತವೆ.

ಹರಣ ಶಿಕಾರಿ ಸಮುದಾಯದಲ್ಲಿ ಬಾಲ್ಯವಿಹಾಗಳು ಹೆಚ್ಚಾಗಿ ಕಂಡುಬಂದಿದ್ದು, ಅಪ್ರಾಪ್ತ ವಯಸ್ಸನಲ್ಲಿ ಮದುವೆ ಮಾಡಿಸಿದರಿಂದಾಗಿ ಇನ್ನೂ ಕುಟುಂಬದ ಹೊರೆಯನ್ನು ಹೊರಲಾರದಷ್ಟು ಮಾನಸಿಕವಾಗಿ ಸಿದ್ಧರಿರುವುದಿಲ್ಲ. ಇಂಥ ಸಣ್ಣ ವಯಸ್ಸಿನಲ್ಲಿ ತಾಯ್ತತನ ಜವಾಬ್ದಾರಿಯನ್ನು ಪದೇ ಪದೇ ಹೊರಬೇಕಾಗುವುದರಿಂದ ಅವರ ಆರೋಗ್ಯದ ಮೇಲೆ ಪ್ರಭಾವ ಬೀರುವುದು. ರಕ್ತಹೀನತೆ, ಶಾರೀರಿಕ ಸಮಸ್ಯೆಗಳಿಂದ ಬಳಲುತ್ತಿರುವ ಹೆಣ್ಣು ಮಕ್ಕಳು ಅಧಿಕವಾಗಿ ಕಂಡುಬರುತ್ತಾರೆ. ಹರಣ ಶಿಕಾರಿ ಸಮುದಾಯದ ಮಹಿಳೆಯರಿಗೆ ಆಧುನಿಕತೆಯ, ಕೊರತೆಯಿದೆ, ನಗರದ ಮಧ್ಯಭಾಗದಲ್ಲಿ ನೆಲೆಸಿರುವ ಈ ಸಮುದಾಯವು ಮುಖ್ಯವಾಹಿನಿಯಿಂದ ಬಹುಮಟ್ಟಿಗೆ ದೂರವಿರುವುದು ಕಂಡುಬರುತ್ತದೆ. ಅದರಲ್ಲಿ ಮಹಿಳೆಯರು ೪ ಗೋಡೆಗಳ ಮಧ್ಯೆಯೂ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ. ಅಲ್ಲದೆ ಹರಣ ಶಿಕಾರಿ ಮಹಿಳೆಯರು ಕುಟುಂಬ ಕಲ್ಯಾಣ ಯೋಜನೆಯನ್ನು ಪಡೆದುಕೊಳ್ಳುವಲ್ಲಿ ವಿಫಲರಾಗಿದ್ದಾರೆ. ಅದರ ಬಗ್ಗೆ ಯಾವುದೇ ರೀತಿಯ ಮಾಹಿತಿಯನ್ನು ಕೂಡಾ ಅವರು ಪಡೆದಿರುವುದಿಲ್ಲ, ಒಂದು ವೇಳೆ ಕುಟುಂಬ ಯೋಜನೆಯನ್ನು ಪಡೆದುಕೊಳ್ಳುವಲ್ಲಿ ಮಹಿಳೆಯರು ತಮ್ಮ ಹಿತಾಸಕ್ತಿಯನ್ನು ತೋರಿದರೂ ಅದಕ್ಕೆ ಪೂರಕವಾದ ಯಾವುದೇ ರೀತಿ ಸಹಾಯವು ಕುಟುಂಬದ ಸದಸ್ಯರಿಂದ ದೊರೆಯುವುದಿಲ್ಲ. ಪುರುಷಾಧಿಪತ್ಯವನ್ನು ನಂಬಿಕೊಂಡಿರುವ ಮಹಿಳೆ ಕುಟುಂಬ ಯೋಜನೆಯ ಫಲವನ್ನು ಪಡೆದುಕೊಳ್ಳಲು ಹಿಂಜರಿಯುತ್ತಾಳೆ. ಗಂಡನ ಅನುಮತಿಯಿಲ್ಲದೇ ಯಾವುದೇ ಪ್ರಕ್ರಿಯೆಯಲ್ಲಿ ತೊಡಗವಂತಿಲ್ಲ, ಇಂಥಹ ವಿಷಯದಲ್ಲಿ ಸಾಮಾನ್ಯವಾಗಿ ಪುರುಷರು ನಿರಾಕರಣೆಗೆ ಒಳಗಾಗುತ್ತಾರೆ.

| ಅಭಿಪ್ರಾಯ | ಆವೃತ್ತಿ | ಪ್ರಮಾಣ |
|---|---|---|
| ಕುಟುಂಬ ಯೋಜನೆಯನ್ನು ಬಳಸಿಕೊಂಡವರು | ೨ | ೩.೩೩ |
| ಬಳಸದೇ ಇರುವವರು | ೫೮ | ೯೬.೬೭ |
| ಒಟ್ಟು | ೬೦ | ೧೦೦ |

ಕುಟುಂಬ ಯೋಜನೆಯನ್ನು ಬಳಸಿಕೊಂಡ ಮಹಿಳೆಯರು ಕೇವಲ ಅನಿವಾರ್ಯತೆಯಿದ್ದಾಗ ಮಾತ್ರ ಅಂದರೆ ಕೆಲವು ಕ್ಯಾನ್ಸರದಂತಹ ಸಮಸ್ಯೆಗಳಿಂದ ಬಳುಲುತ್ತಿದ್ದ ಮಹಿಳೆಯರು ಮಾತ್ರ ಈ ಯೋಜನೆಗೆ ಒಳಗಾಗಿದ್ದಾರೆ.

ಹರಣ ಶಿಕಾರಿ ಕುಟುಂಬದಲ್ಲಿ ಮಹಿಳೆಯರ ಶ್ರಮದ ಫಲವಾಗಿ ಅನೇಕ ವಲಯದ ಆರ್ಥಿಕ ಮಟ್ಟದಲ್ಲಿ ಸ್ವಲ್ಪ ಸುಧಾರಣೆಯನ್ನು ಕಾಣಬಹುದಾಗಿದೆ. ಬಿಜಾಪುರ ನಗರದ ಹರಣ ಶಿಕಾರಿ ವಲಯದಲ್ಲಿ

ಶೇ ೮೦ರಷ್ಟು ಕುಟುಂಬಗಳ ಆರ್ಥಿಕ ಮೂಲ, ಕಳ್ಳಭಟ್ಟಿ ಸಾರಾಯಿ ಮಾಡುವುದು. ಇದರ ತಯಾರಿಕೆಯಲ್ಲಿ ಮಹಿಳೆಯರೇ ಅಧಿಕವಾಗಿ ಕಂಡುಬರುತ್ತಾರೆ. ಮಹಿಳೆಯು ದಿನವಿಡೀ ಕಟ್ಟಿಗೆಯ ಚಾದನ..ರಿಸಿ ಒಲೆಯ ಮೇಲೆ ಸರಾಯಿ ಭಟ್ಟಿ ಇಳಿಸುವ ಕ್ರಿಯೆಯಲ್ಲಿ ತೊಡಗಿರುವುದರಿಂದ, ಚರ್ಮರೋಗ, ಕಣ್ಣುರಿತ, ಶ್ವಾಸಕೋಶದ ತೊಂದರೆ ಮುಂತಾದ ಅನಾರೋಗ್ಯಕವಾದ ಸಮಸ್ಯೆಗಳಿಗೆ ಒಳಗಾಗಿದ್ದಾರೆ.

### ೩.೮.ಶೈಕ್ಷಣಿಕ ಸ್ಥಿತಿಗತಿ

ಶಿಕ್ಷಣವು ಕೂಡಾ ಒಂದು ಸಾಮಾಜಿಕ ಸಂಸ್ಥೆಯಾಗಿದ್ದು, ಇದು ಯಾವುದೇ ಒಂದು ಸಮಾಜದ ಅಭಿವೃದ್ಧಿಯ ಸೂಚಾಂಕವನ್ನು ತಿಳಿಯಲು ಶಿಕ್ಷಣದ ಪೂರೈಕೆಯ ಪ್ರಮಾಣದಿಂದಲೇ ಅಳೆಯಲಾಗುವುದು. ಶಿಕ್ಷಣವನ್ನು ಪಡೆಯುವುದು ಪ್ರತಿಯೊಬ್ಬ ವ್ಯಕ್ತಿಯ ಹಕ್ಕಾಗಿರುವುದು. ಶಿಕ್ಷಣವು ವ್ಯಕ್ತಿಯ ವ್ಯಕ್ತಿತ್ವ ವಿಕಾಸನಕ್ಕೆ ಪ್ರಮುಖ ಆಕಾರವಾಗಿರುವುದು. ಪ್ರಾಚೀನ ಕಾಲದಲ್ಲಿ ಮಹಿಳೆ ಮತ್ತು ಪುರುಷರಿಗೆ ಶಿಕ್ಷಣವನ್ನು ಪಡೆದುಕೊಳ್ಳಲು ಸಮಾನವಾದ ಹಕ್ಕನ್ನು ನೀಡಲಾಗಿತ್ತು ಎಂಬುದಕ್ಕೆ ಗಾರ್ಗಿ, ಮೈತ್ರಿರಂಥಹ ಆದರ್ಶ ನಾರಿಯರರನ್ನು ಉದಾಹರಿಸಬಹುದು. ಆದರೆ ಅಲ್ಲಿ ಪುರುಷರು ಪಡೆದ ಶಿಕ್ಷಣಕ್ಕಿಂತ ಮಹಿಳೆಯರು ಶಿಕ್ಷಣ ಪಡೆದಿರುವುದು ಬೆರಳೆಣಿಕೆಯಷ್ಟು ಮಾತ್ರ. ಪಿತೃ ಪ್ರಧಾನತೆಯನ್ನು ಹೊಂದಿದ ಭಾರತೀಯ ಸಮಾಜದಲ್ಲಿ ಪುರುಷರಿಗಿಂತ ಮಹಿಳೆಯರ ಶೈಕ್ಷಣಿಕ ಮಟ್ಟ ಕಡಿಮೆಯಿರುವುದು ಗೋಚರಿಸುತ್ತವೆ. ಇಲ್ಲಿ ಪುರುಷನಿಗೆ ಮೊದಲ ಆಧ್ಯತೆಯನ್ನು ನೀಡಲಾಗಿರುವುದು, ಸಮಾಜದಲ್ಲಿ ಮಹಿಳಾ ವಿರೋಧ ಕಟ್ಟಿಕೊಟ್ಟ ಅನೇಕ ಮಿಥ್ಯೆಗಳು, ಧಾರ್ಮಿಕ ಆಚರಣೆಗಳು, ಮಹಿಳೆಯರು ಕುಟುಂಬದ ಹೊರಗೆ ಬಂದು ಶಿಕ್ಷಣವನ್ನು ಪಡೆದುಕೊಳ್ಳುವಲ್ಲಿ ಅಡ್ಡಿಯನ್ನುಂಟು ಮಾಡುತ್ತಿವೆ.

ಇಂದಿನ ಆಧುನಿಕ, ವಿಜ್ಞಾನ ಮತ್ತು ತಂತ್ರಜ್ಞಾನದ ಯುಗದಲ್ಲಿ ಮಹಿಳೆಯರ ಶಿಕ್ಷಣದ ಮಟ್ಟ ಸ್ವಲ್ಪ ಅಭಿವೃದ್ಧಿಯ ಹಂತದವರೆಗೂ ತಲುಪಿದರೂ ಕೂಡಾ ಅದು ಕೇವಲ ಮೇಲ್ವರ್ಗ ಮತ್ತು ಮಧ್ಯಮ ವರ್ಗದ ಮಹಿಳೆಯರಿಗೆ ಮಾತ್ರ ಸೀಮಿತವಾಗಿದೆ. ಆದರೆ ಕೆಳವರ್ಗದ ಬಡ ಸಮುದಾಯದ ಮಕ್ಕಳು ಶಿಕ್ಷಣವನ್ನು ಪಡೆಯುತ್ತಿದ್ದರೂ ಅಲ್ಲಿ ಪುರುಷನ ಶಿಕ್ಷಣಕ್ಕೆ ಮಾತ್ರ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ. ಆದರೆ ಸ್ತ್ರೀ ಶಿಕ್ಷಣಕ್ಕೆ ಆದ್ಯತೆ ಇಲ್ಲದಂತಾಗಿದೆ. ಹೀಗೆ ಸಮಾಜಿಕ ಸಂದರ್ಭದಲ್ಲಿ ಮಹಿಳೆಯರ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕುಟುಂಬದಲ್ಲಿಯೇ ತಾರತಮ್ಯಕ್ಕೆ ಒಳಗಾಗಿರುವುದನ್ನು ಕಾಣಬಹುದು. ಸಮಾಜದ ಮುಖ್ಯವಾಹಿನಿಯ ಸಂಪರ್ಕದ ನೆಲೆಯಲ್ಲಿ ಬದುಕುತ್ತಿರುವ ವರ್ಗಗಳ ಸ್ಥಿತಿಯೇ ಹೀಗಿರುವಾಗ ಇನ್ನೂ ಬುಡಕಟ್ಟು ಸಮುದಾಯದ ಶೈಕ್ಷಣಿಕ ಮಟ್ಟದ ಮಿತಿಯನ್ನು ನೋಡಿದಾಗ ಅದು ಅಭಿವೃದ್ಧಿಯ ಕೆಳಹಂತದಲ್ಲಿಯೇ ನಿರೂಪಿತವಾಗಿರುವುದನ್ನು ಕಾಣಬಹುದು. ಅನೇಕ ಬುಡಕಟ್ಟು ಸಮುದಾಯಗಳಲ್ಲಿ ಕೆಲವರು ಮಾತ್ರ ಶಿಕ್ಷಣವನ್ನು ಪಡೆದುಕೊಳ್ಳುವಲ್ಲಿ ಯಶಸ್ವಿಯಾಗಿವೆ. ಆದರೆ ಇನ್ನೂ ಹಲವಾರು ಸಮುದಾಯಗಳು ಶಿಕ್ಷಣದಿಂದ ಬಹುದೂರ ಉಳಿದಿರುವುದು ಕಂಡು ಬರುತ್ತವೆ. ಇಂಥಹ ಸಮುದಾಯದ ಏಳಿಗೆಗಾಗಿ ಅನೇಕ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಶಿಕ್ಷಣ ನೀಡುವ ಕಾರ್ಯಕ್ರಮಗಳನ್ನು

ಹಮ್ಮಿಕೊಳ್ಳುತ್ತಿದೆ. ಬುಡಕಟ್ಟು ಸಮುದಾಯದಲ್ಲಿ ಕೆಲವೊಂದು ಸಮುದಾಯಗಳು ನಿರೀಕ್ಷಿತ ಮಟ್ಟಕ್ಕಿಂತ ಅಧಿಕಾರ ಶಿಕ್ಷಣವನ್ನು ಪಡೆದುಕೊಂಡು ಸಮಾಜದ ಮುಖ್ಯ ವಾಹಿನಿಯಲ್ಲಿ ಸಂಪೂರ್ಣವಾಗಿ ತನ್ನನ್ನು ತೊಡಗಿಸಿಕೊಂಡಿದ್ದಾರೆ. ಆದರೆ ಕೆಲವು ಸಮುದಾಯಗಳು ಶಿಕ್ಷಣ ವ್ಯವಸ್ಥೆಯಲ್ಲಿ ನಿಶ್ಚಲವಾಗಿವೆ. ಇವುಗಳಂತೆ ಹರಣ ಶಿಕಾರಿ ಸಮುದಾಯದ ಶೈಕ್ಷಣಿಕ ಮಟ್ಟವು ಸಹ ತೀರಾ ಕೆಳಮಟ್ಟದಲ್ಲಿದೆ.

| | ಆವೃತ್ತಿ ಸಂಖ್ಯೆ | ಶೇಕಡ ಪ್ರಮಾಣ |
|---|---|---|
| ಪುರುಷರು | ೧೫ | ೨೫ |
| ಮಹಿಳೆಯರು | ೦೨ | ೩.೩೩ |
| ಮಕ್ಕಳು | ೪೩ | ೭೧.೬೭ |
| ಒಟ್ಟು | ೬೦ | ೧೦೦ |

ಈ ಮೇಲಿನ ಕೋಷ್ಟಕದ ಪ್ರಕಾರ ಪುರುಷರ ಶೈಕ್ಷಣಿಕ ಸ್ಥಾನವು ಕಡಿಮೆಯಿರುವಾಗ ಮಹಿಳೆಯರ ಶೈಕ್ಷಣಿಕ ಮಟ್ಟವು ತೀರಾ ಕೆಳಮಟ್ಟದಾಗಿದೆ. ಹರಣ ಶಿಕಾರಿ ಮಕ್ಕಳು ಶಿಕ್ಷಣವನ್ನು ಪಡೆಯುವಲ್ಲಿ ಸ್ವಲ್ಪ ಪ್ರಗತೀಯ ಹಂತದಲ್ಲಿ ಕಂಡುಬಂದರೂ ಕೂಡಾ ಅಲ್ಲಿ ಹೆಣ್ಣು ಮಕ್ಕಳು ಕಡಿಮೆ ಸಂಖ್ಯೆಯಲ್ಲಿ ಇರುವುದನ್ನು ಗಮನಿಸಬಹುದು.

ಕುಟುಂಬದಲ್ಲಿ ಹೆಣ್ಣಿನ ಜವಾಬ್ದಾರಿಯನ್ನು ನಾಲ್ಕು ಗೋಡೆಯ ಮಧ್ಯೆಯೇ ಎಂಬ ಮನೋಧೋರಣೆಯನ್ನು ಸಮುದಾಯವು ಪ್ರಾರಂಭದಲ್ಲಿ ಮಾನಸಿಕವಾಗಿ ತುಂಬಿಬಿಡುತ್ತವೆ. ಅಲ್ಲದೆ ಕುಟುಂಬದಲ್ಲಿ ಕಂಡುಬರುವ ಹೆಣ್ಣು ಗಂಡು ಎಂಬ ತಾರತಮ್ಯದ ಗುಣವು ಹೆಣ್ಣು ಮಕ್ಕಳ ಶೀಕ್ಷಣಕ್ಕೆ ಕೆಲವೊಂದು ಅಡ್ಡಿ ಉಂಟುಮಾಡಿವೆ. ಗಂಡು ಮಗುವಿಗೆ ನೀಡುವಷ್ಟು ಪ್ರಾಶಸ್ತ್ಯ ಹೆಣ್ಣು ಮಕ್ಕಳಿಗೆ ನೀಡುವುದಿಲ್ಲ. ಹೆಣ್ಣು ಮಕ್ಕಳ ಕೆಲವೊಂದು ಅವಶ್ಯಕತೆಗಳನ್ನು ಕುಂಠಿತಗೊಳಿಸಿ ಗಂಡು ಮಕ್ಕಳಿಗೆ ನೀಡಲಾಗುವುದು. ಅಂಥಹ ಅವಶ್ಯಕತೆಗಳಲ್ಲಿ ಮುಖ್ಯವಾದದ್ದು ಶಿಕ್ಷಣ, ಹರಣ ಶಿಕಾರಿ ಸಮುದಾಯದಲ್ಲಿ ಹೆಣ್ಣು ಮಕ್ಕಳಿಗೆ ಶಿಕ್ಷಣದಿಂದ ವಂಚಿತಗೊಳಿಸುವುದರ ಮೂಲಕ ಅವಳ ಏಳಿಗೆಗೆ ಅಡತಡೆಯನ್ನುಂಟು ಮಾಡುವುದಲ್ಲದೇ ಅಜ್ಞಾನಕ್ಕೆ ತಳ್ಳಲಾಗಿದೆ. ಹರಣಶಿಕಾರಿ ಕುಟುಂಬದಲ್ಲಿ ಸಾಂಪ್ರದಾಯಿಕ ಆಚರಣೆಗಳು ಮಹಿಳೆಯರ ಕೌಟುಂಬಿಕ ಜೀವನಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡುವುದು ಹೊರತು ಶಿಕ್ಷಣಕ್ಕಲ್ಲ. "ಪ್ರಾರಂಭದಿಂದಲ್ಲೇ ಹುಡುಗಿಗೆ ಮನೆ ಆಟದ ಮಾದರಿ ಪಾತ್ರವಾಗಿ ಮಾಡಿ ಅಡುಗೆ, ಮನೆಗೆಲಸ ಕಲಿಸುತ್ತಾರೆ. ಹುಡುಗರಿಗೆ ಹೊರಗೆ ನಡೆದಾಡುವ ಜವಾಬ್ದಾರಿಯನ್ನು ಸೂಚಿಸುವಂತೆ ಬೆಳೆಸುತ್ತಾರೆ. ಕುಟುಂಬದ ಪೂಜೆ, ಸಂಪ್ರದಾಯಗಳಲ್ಲಿ ಹುಡುಗಿಯರನ್ನು ತೊಡಗಿಸಿ ಆಕೆ ತನ್ನ ಪಾತ್ರ ಬೌದ್ಧಿಕ ಬೆಳವಣಿಗೆಯಲ್ಲಿ ಮನೆ ಹಾಗೂ ಕುಟುಂಬದ ಸದಸ್ಯರನ್ನು ತೃಪ್ತಿಪಡಿಸುವಷ್ಟು ಮಾತ್ರ ಎಂದು ಭಾವಿಸುವಂತೆ ಮಾಡುತ್ತಾರೆ. ಹೀಗಾಗಿ ಹುಡುಗಿಯರಿಗೆ ಶಾಲೆಯ ಆಕರ್ಷಣೆಯೇ ಇಲ್ಲವಾಗುತ್ತದೆ"[೧೩] ಇಂಥಹ ಮನೋವೃತ್ತಿ ಹೆಣ್ಣು ಮಕ್ಕಳಲ್ಲಿ ಮನೆಯೆ ತನ್ನ ಎಲ್ಲಾದಕ್ಕೂ ಮೂಲ ಎಂಬ ನಿರ್ಧಾರಕ್ಕೆ ಬಂದುಬಿಡುವುದರಿಂದ ಶಿಕ್ಷಣವನ್ನು ನಿರ್ಲಕ್ಷ ಮಾಡುವರು.

ಸಾಮಾಜಿಕ ಸಂದರ್ಭದಲ್ಲಿ ಪಿತೃಪ್ರಧಾನದ ನೆಲೆಯಲ್ಲಿಯೇ ಹೆಣ್ಣು ಮಕ್ಕಳ ಬದುಕಿನ ಎಳೆಗಳು ರೂಪಿತಗೊಂಡಿರುವುದು. ಪಿತೃಪ್ರಧಾನದ ಧಾರ್ಮಿಕ, ತತ್ವಶಾಸ್ತ್ರಗಳಂಥ ಮೌಲ್ಯಗಳು ಮಹಿಳೆಯರ ಮೇಲೆ ಹೇರಿರುವ ನಿರ್ಬಂಧಗಳು ಅವರನ್ನು ಒಂದು ವಲಯಕ್ಕೆ ಸೀಮಿತಗೊಳಿಸಿದೆ. ಪಿತೃ ಪ್ರಧಾನ ವ್ಯವಸ್ಥೆ ಕುಟುಂಬ, ವಿವಾಹ ಸಂಸ್ಥೆಗಳಲ್ಲಿ ಸ್ತ್ರೀಯರನ್ನು ಕಟ್ಟಿ ಹಾಕುವ ಕಟ್ಟು ನಿಟ್ಟಾದ ನಿಯಮಗಳನ್ನು ರೂಪಿಸಿದೆ. ಸಂಗಾತಿಯಾಗಿದ್ದ ಸ್ತ್ರೀವ್ಯಕ್ತಿಯನ್ನು ಗುಲಾಮಳನ್ನಾಗಿ ಮಾಡಿಕೊಂಡು ವಿಜೃಂಭಿಸಿದ ಪುರುಷನು ತಾನೇ ಶಕ್ತಿವಂತನೆಂದು ಸಾರಲು ಸ್ತ್ರೀಯರನ್ನು ನಿಯಂತ್ರಿಸಿದ್ದಾನೆ. ಗೊಂಬೆಗಳನ್ನು ಕೊಟ್ಟು ಆಟವಾಡಿಸಿ, ಗೃಹಣಿಯ, ಗೃಹಬಂದಿತ್ವದ ಹಾಗೂ ಗೃಹಣಿತ್ವದ ಮೂಲಕ ಸ್ತ್ರೀಯರ ಆಸ್ಮಿತೆಯ ಅಸ್ತಿತ್ವವನ್ನು ಹತ್ತಿಕ್ಕುವ ತಂತ್ರಗಳು ಲೆಕ್ಕವಿಲ್ಲದಷ್ಟಿವೆ, ತಾಯ್ತನವನ್ನು ವೈಭವೀಕರಿಸಿ ಅವಳ ಆಲೋಚನಾಲೋಕವನ್ನು ಸ್ಥಗಿತಗೊಳಿಸಿ ತನ್ಮೂಲಕ ಚಲನಶೀಲತೆಗೆ ತಡೆಯೊಡ್ಡಲಾಯಿತು"[09] ಹೀಗೆ ಪುರುಷಾಧಿಪತ್ಯವನ್ನು ಹೊಂದಿರುವ ಸಮಾಜದಲ್ಲಿ ಮಹಿಳೆಯು ಸಹಜವಾಗಿ ಶಿಕ್ಷಣದಿಂದ ದೂರುಳಿಯುವಳು, ಹರಣ ಶಿಕಾರಿ ಸಮುದಾಯದಲ್ಲಿ ಮಹಿಳೆಯ ಗೃಹಣಿತ್ವಕ್ಕೆ, ತಾಯ್ತನಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡುವುದರಿಂದ ಮಹಿಳೆ ಶಿಕ್ಷಣವನ್ನು ಪಡೆಯುವುದಾದರೇ ಕುಟುಂಬದ ಎಲ್ಲಾ ಕರ್ತವ್ಯ ಜವಾಬ್ದಾರಿಗಳನ್ನು ನಿರ್ವಹಿಸಲಾಗುವುದಿಲ್ಲ ಎಂಬ ಧೋರಣೆ ಮಹಿಳೆ ಶಿಕ್ಷಣದಿಂದ ವಂಚಿತಳಾಗರುವುದನ್ನು ಗಮನಿಸಬಹುದು.

ಹರಣ ಶಿಕಾರಿ ಸಮುದಾಯದಲ್ಲಿ ಕೇವಲ ಉನ್ನತ ಮತ್ತು ಶ್ರೀಮಂತ ಕುಟುಂಬಗಳಲ್ಲಿ ಮಾತ್ರ ಹೆಣ್ಣು ಮಕ್ಕಳು ಶಾಲೆಗೆ ಹೋಗುತ್ತಿರುವುದನ್ನು ಗಮನಿಸಬಹುದು. ಇಂಥಹ ಹೆಣ್ಣು ಮಕ್ಕಳು ಪ್ರೌಢಾವ್ಯಸ್ಥೆಗೆ ಬರುವಾಗ ಶಿಕ್ಷಣವನ್ನು ಮೊಟಕುಗೊಳಿಸಲಾಗುವುದು. ಕಾರಣ ಆ ಹೆಣ್ಣು ಮಗಳಿಗೆ ವಿವಾಹ ಮಾಡಿಸಬೇಕೆನ್ನುವ ಉದ್ದೇಶ. ಹರಣ ಶಿಕಾರಿ ಸಮುದಾಯದಲ್ಲಿ ಹೆಚ್ಚಿನ ಸಂಖ್ಯೆಯ ಹೆಣ್ಣು ಮಕ್ಕಳು ಬಾಲ್ಯವಿವಾಹಕ್ಕೆ ಒಳಗಾಗುವುದರಿಂದ ಶಿಕ್ಷಣಮಟ್ಟ ಕುಂಠಿತವಾಗಿರುವುದನ್ನು ಕಾಣಬಹುದು. ಅಲ್ಲದೇ ಹರಣ ಶಿಕಾರಿ ಕುಟುಂಬಗಳು ಬಡತನದ ಹೊರೆಯನ್ನು ಹೊತ್ತಿದ್ದು, ಒಂದು ಹೊತ್ತಿನ ಊಟಕ್ಕೆ ಗತಿಯಿಲ್ಲದಷ್ಟು ಪರಿಸ್ಥಿತಿಯಲ್ಲಿ ಶಿಕ್ಷಣವನ್ನು ನೀಡುವುದು ಕಷ್ಟಸಾಧ್ಯವಾದ ಕೆಲಸವಾಗಿದೆ. ಈ ಸಮುದಾಯದಲ್ಲಿ ಹೆಚ್ಚಿನ ಕುಟುಂಬದ ನಿರ್ವಹಣೆಯ ಸಂಪೂರ್ಣವಾದ ಜವಾಬ್ದಾರಿಯನ್ನು ಮಹಿಳೆಯೇ ಹೊತ್ತಿರುವುದರಿಂದ ಅನೇಕ ರೀತಿಯ ಸಮಸ್ಯೆಗಳಿಗೆ ಗುರಿಯಾಗುತ್ತಾಳೆ. ಇಷ್ಟೆಲ್ಲ ಜವಾಬ್ದಾರಿಯನ್ನು ಹೊತ್ತಿದ್ದರೂ ಕೂಡಾ ಮಹಿಳೆ ತಾರತಮ್ಯಕ್ಕೆ ಒಳಗಾಗುವಳು. ಅನೇಕ ಮೂಲಭೂತ ಅವಶ್ಯಕತೆಗಳನ್ನು ಪಡೆಯುವಲ್ಲಿ ವಂಚಿತಳಾಗುವಳು, ಶಿಕ್ಷಣದ ವಿಷಯಕ್ಕೆ ಬಂದಾಗಲೂ ಕೂಡಾ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಆದ್ಯತೆ ನೀಡದೇ ಗಂಡು ಮಕ್ಕಳಿಗೆ ಶಿಕ್ಷಣ ನೀಡುತ್ತಿರುವುದು ಕಂಡು ಬರುತ್ತದೆ. ಹರಣ ಶಿಕಾರಿ ಸಮುದಾಯದಲ್ಲಿ ಗಂಡು ಮಕ್ಕಳು ಮನೆಯ ಉದ್ಧಾರಕರು ಮುಂದೆ ಮನೆಯ ಜವಾಬ್ದಾರಿಯನ್ನು ಹೊರುವವರು ಹೆಣ್ಣು ಮಕ್ಕಳು ಗಂಡನ ಮನೆಗೆ ಹೋಗುವವರು ಎಂಬ ಮನೋಧೋರಣೆ ಹೆಣ್ಣು ಮಕ್ಕಳ ಶಿಕ್ಷಣವನ್ನು ಮೊಟಕುಗೊಳಿಸುವುದಕ್ಕೆ ಮುಖ್ಯ ಕಾರಣವಾಗಿದೆ. ಹರಣ ಶಿಕಾರಿ ಸಮುದಾಯದಲ್ಲಿ ಮೇಲ್ವರ್ಗದ ಕುಟುಂಬದಲ್ಲಿ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಿದರೂ. ಕೂಡಾ ಅದು ಕೆಲ ಹಂತಕ್ಕೆ

ಸೀಮಿತ ಮಾತ್ರ ಆದ್ದರಿಂದ ಈ ಸಮುದಾಯದ ಯಾವ ಹೆಣ್ಣು ಮಗಳು ಉನ್ನತ ಶಿಕ್ಷಣವನ್ನು ಪಡೆದುಕೊಂಡಿಲ್ಲ.

ಅತ್ಯಂತ ಕಡು ಬಡತನದಲ್ಲಿ ಬದುಕನ್ನು ಸಾಗಿಸುತ್ತಿರುವ ಹರಿಣ ಶಿಕಾರಿ ಸಮುದಾಯವು ಶೈಕ್ಷಣಿಕ ದೃಷ್ಟಿಕೋನದಲ್ಲಿ ತುಂಬಾನೆ ಹಿಂದುಳಿದಿದೆ. ಹೆಣ್ಣು ಮಕ್ಕಳಿಗೆ ೭ನೇ ತರಗತಿಯಿಂದ ಹತ್ತನೇ ತರಗತಿಯವರೆಗ ಶಿಕ್ಷಣ ಕೊಡಿಸಿದರೆ ಹೆಚ್ಚು, ಆನಂತರ ಮದುವೆ ಮಾಡಿಸಿ ಗಂಡನ ಮನೆಗೆ ಕಳಿಸುವ ಪರಿಪಾಠ ಈ ಸಮುದಾಯದಲ್ಲಿದೆ. ಸ್ವಲ್ಪ ಆರ್ಥಿಕವಾಗಿ ಸಬಲರಾದ ಕುಟುಂಬದ ಮಕ್ಕಳು ಮಾತ್ರ ಈ ಹಂತದವರೆಗೆ ಅಧ್ಯಯ ಮಾಡುತ್ತಾರೆ. ಆದರೆ ಏನು ಇಲ್ಲದ ನಿರ್ಗತಿಕ ಕುಟುಂಬದ ಹೆಣ್ಣು ಮಕ್ಕಳಿಗೆ ಈ ಶಿಕ್ಷಣ ಅನ್ನುವಂತದ್ದು ಕನಸಾಗಿಯೇ ಉಳಿದಿದೆ. ಪರರ ಮನೆಗೆ ಹೋಗುವ ಹೆಣ್ಣಿಗೆ ಶಿಕ್ಷಣ ಕೊಡಿಸುವುದರಿಂದ ನಮಗೆ ಏನು ಪ್ರಯೋಜನ ವಾಗಲಾರದು ಎಂದು ಗಂಡು ಮಕ್ಕಳ ಶಿಕ್ಷಣಕ್ಕೆ ಇತ್ತೀಚಿಗೆ ಸ್ವಲ್ಪ ಮಟ್ಟಿಗೆ ಆದ್ಯತೆ ನೀಡುತ್ತಿದ್ದಾರೆ.

### ೩.೯. ಆರ್ಥಿಕ ಸ್ಥಿತಿಗತಿಗಳು

ಮಾನವ ಇತಿಹಾಸದುದಕ್ಕೂ ಸ್ತ್ರೀ ಪುರುಷರು ದುಡಿಮೆಯಲ್ಲಿ ತೊಡಗಿರುವುದನ್ನು ನೋಡುತ್ತೇವೆ. ಮಾನವ ಅಲೆಮಾರಿ ಹಂತದಿಂದ ನಾಗರಿಕತೆಯ ಇವತ್ತಿನ ಹಂತದವರೆಗೂ ಒಂದಲ್ಲಾಒಂದು ರೀತಿಯ ದುಡಿಮೆಯಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ಮಾನವ ತನ್ನ ಜೀವನದ ಉಳಿವಿಗಾಗಿ ನಿರಂತರವಾದ ಹೋರಾಟ ಕ್ರಿಯೆಯಲ್ಲಿ ತೊಡಗಿರುವುದು ದುಡಿಮೆಯ ಮೂಲಕ, ದುಡಿಮೆಯೇ ಮುಖ್ಯ ಆರ್ಥಿಕ ಮೂಲಕವಾಗಿದ್ದು, ಅದು ಸಾಮಾಜಿಕ ಸಂದರ್ಭದಲ್ಲಿ ಮಾನವ ಬದುಕಿಗೆ ಅತ್ಯಮೂಲ್ಯ ಅವಶ್ಯಕತೆಗಳಲ್ಲಿ ಒಂದಾಗಿದೆ. ಆದಿಮ ಹಂತದಲ್ಲಿ ಸ್ತ್ರೀ ಮತ್ತು ಪುರುಷರಲ್ಲಿ ದುಡಿಮೆಯ ಕಲ್ಪನೆ ಇರಲಿಲ್ಲ. ಬೇಟೆಯನ್ನೇ ಮುಖ್ಯ ವೃತ್ತಿಯನ್ನಾಗಿ ಪರಿಗಣಿಸಿದ ಮಾನವ ಅದರಲ್ಲಿ ಸ್ತ್ರೀ ಮತ್ತು ಪುರುಷರು ಸಮವಾಗಿ ಭಾಗವಹಿಸುತ್ತಿದ್ದರು. ಕಾಡಿನಲ್ಲಿ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಹಸಿ ಮಾಂಸವನ್ನು ತಿನ್ನುತ್ತಿದ್ದ ಮಾನವ ಕಾಲಾಂತರದಲ್ಲಿ ಬೆಂಕಿಯನ್ನು ಕಂಡುಹಿಡಿದ. ನಂತರ ಪ್ರಾಣಿ ಪಕ್ಷಿಗಳ ಮಾಂಸವನ್ನು ಬೇಯಿಸಿ ತಿನ್ನುವ ಕ್ರಿಯೆಯಲ್ಲಿ ತೊಡಗಿಕೊಂಡ. ಈ ಹಂತದಲ್ಲಿ ಮಾಡುವ ಕೆಲಸದಲ್ಲಿ ಹಂಚಿಸುರುವಾಯಿತು. ಮಹಿಳೆಯರು ಆಹಾರವನ್ನು ಬೇಯಿಸುವ ಮತ್ತು ಹಂಚುವ ಕ್ರಿಯೆಯಲ್ಲಿ ತೊಡಗಿಕೊಂಡು ಒಂದು ಕಡೆ ನೆಲೆಸಿದರು. ಪುರುಷರು ಬೇಟೆಯಾಡುವುದನ್ನು ವೃತ್ತಿಯನ್ನಾಗಿ ಮಾಡಿಕೊಂಡು ಒಂದು ಕಡೆ ನೆಲೆಸಿದ. ಮಹಿಳೆಯರು ಸುತ್ತಲೂ ಬೆಳೆದ ಗಡ್ಡೆ ಗೆಣಸು, ಹಣ್ಣು ಹಂಪಲು ಸಂಗ್ರಹಣೆಯಲ್ಲಿ ತೊಡಗಿಕೊಂಡರು ಅಲ್ಲದೆ ಬೀಜ ಒಡೆದು ಮೊಳಕೆಯೊಡೆವ ಸಂಗತಿಯನ್ನು ಅರಿತುಕೊಂಡ ಮಹಿಳೆಯರು ತಮ್ಮ ವಾಸಸ್ಥಳದ ಸುತ್ತಲು ಬೆಳೆಯನ್ನು ಬೆಳೆಸಲು ಪ್ರಾರಂಭಿಸಿದರು ಹೀಗೆ ಮಹಿಳೆಯರು ಮಾಡುವಂತ ಕೆಲಸವಾದ ಸಂತಾನೋತ್ಪತ್ತಿ ಮತ್ತು ಕೃಷಿ ಕೆಲಸ ಪ್ರಧಾನವಾಗಿರುವುದರಿಂದ ಮಹಿಳೆಯರಿಗೆ ಮುಖ್ಯಸ್ಥಾನವನ್ನು ಒದಗಿಸಲಾಯಿತು. ಕೃಷಿಯು ಜೀವನದ ಊಳಿ, ಕುಟುಂಬದ ನಿರ್ವಹಣೆಗಾಗಿ ಕೈಗೊಳ್ಳಲಾಗಿತೋ ಅಲ್ಲಿಯವರೆಗೆ ಸ್ತ್ರೀ ಮತ್ತು ಪುರುಷರಿಗೆ ಯಾವುದೇ ತಾರತಮ್ಯ ಇರಲಿಲ್ಲ. ಕೃಷಿಯು ಕುಟುಂಬದ

ಮೀತಿಯನ್ನು ಮೀರಿ ಮಾರುಕಟ್ಟೆಗೆ ವಿಸ್ತೃತಗೊಂಡಿತು. ಆಗ ಮಾರುಕಟ್ಟೆಯ ವಲಯಕ್ಕೆ ಪುರುಷರು ಪ್ರವೇಶಿಸಿದರು ಮಹಿಳೆಯರನ್ನು ಖಾಸಗಿ ವಲಯಕ್ಕೆ ಸೀಮಿತಗೊಳಿಸಲಾಯಿತು.

ಬುಡಕಟ್ಟು ಜನಾಂಗದಲ್ಲಿ ಕೃಷಿ ಭೂಮಿಯು ಒಬ್ಬ ವ್ಯಕ್ತಿಯ ಒಡೆತನಕ್ಕೆ ಸೇರಿರುತ್ತಿರಲಿಲ್ಲ, ಪ್ರತಿಯೊಬ್ಬರಿಗೂ ಭೂಮಿ ಉಳುಮೆ ಮಾಡುವ ಹಕ್ಕಿತ್ತು. ಅಂದರೆ ಗಂಡಸರಿಗೆ ಭೂಮಿಯ ಮೇಲೆ ಹಕ್ಕಿದರೆ ಹೆಂಗಸರಿಗೆ ಬೆಳೆ ಮೇಲೆ ಹಕ್ಕಿರುತ್ತಿತ್ತು. ಭೂಮಿಯ ಕೊರತೆ ಉಂಟಾದಾಗ ಅವರ ಮೌಲ್ಯ ಹೆಚ್ಚಾಗಿ ಪುರುಷರ ಪಾಲಾಗುತ್ತಾ ಬಂದಿತು. ಕ್ರಮೇಣ ಪುರುಷರು ಬೆಳೆಗಳ ಮೇಲೆ ಹಕ್ಕು ಪಡೆದರು. ಹೀಗೆ ಕೃಷಿಯು ಮಹಿಳೆಯರ ಕೈಯಿಂದ ಪುರುಷ ಕೈವಶವಾಯಿತು. ಕೃಷಿ ಕ್ಷೇತ್ರದಲ್ಲಿ ಮಹಿಳೆಯರು ಮಾಡುವ ಕೆಲಸವನ್ನು ಕೇವಲ ಕರ್ತವ್ಯ, ಜವಾಬ್ದಾರಿಗಳೆಂಬ ಮಿಥ್ಯೆಯನ್ನು ಕಟ್ಟಲಾಯಿತು. ಮಹಿಳೆಯರು ಮಾಡುವ ಕೆಲಸ ಅನುತ್ಪಾದಕ ಪುರುಷರು ಮಾಡುವ ಕೆಲಸ ಉತ್ಪಾದಕ ಎಂದು ಪರಿಗಣಿಸಲಾಯಿತು.

ಆರ್ಥಿಕ ಕ್ಷೇತ್ರಕ್ಕೆ ಮಹಿಳೆಯರು ನೀಡುವ ಕೊಡುಗೆ ಅಪಾರ ಆದರೂ ಅದನ್ನು ಗೌಣಗೊಳಿಸಲಾಗಿದೆ. ಪುರುಷನು ಕ್ರಮೇಣ ಭೂಮಿಯ ಮೇಲೆ ಮತ್ತು ಮಹಿಳೆಯರ ಮೇಲೂ ತನ್ನ ಒಡೆತನವನ್ನು ಹೊಂದಿದನು. ಕಾಡಿನ ಒಡಲಲ್ಲಿ, ತಮ್ಮ ಜೀವನವನ್ನು ಸಾಗಿಸುತ್ತಿದ್ದ ಅನೇಕ ಬುಡಕಟ್ಟು ಸಮುದಾಯಗಳು ಅರಣ್ಯ ಸಂರಕ್ಷಣೆಯ ಕಾಯ್ದೆಯಡಿಯ ಕಾನೂನು ಅನ್ವಯವಾದಾಗ ಕಾಡಿನ ಸಂಪನ್ಮೂಲಗಳ ಮೇಲೆ ಅವರ ಹಿಡಿತವನ್ನು ಕ್ರಮೇಣ ಕಡಿಮೆ ಮಾಡಲಾಯಿತು. ಇಂಥಹ ಉತ್ಪನ್ನಗಳ ಮೇಲೆ ನಿರ್ಧಾರಿತವಾದ ಸಮುದಾಯಗಳು ಕಾಡಿನಿಂದ ಹೊರಬಂದು ಅನೇಕ ಸಣ್ಣ ಮಣ್ಣು ಗುಡಿಕೈಗಾರಿಕೆಗಳಂತ ಕೆಲಸದ ನಿರ್ವಹಣೆಯಲ್ಲಿ ತೊಡಗಿಕೊಂಡರು. ಇದರಲ್ಲೂ ಮಹಿಳೆಯರ ಪಾಲೇ ಅಧಿಕವಾಗಿತ್ತು. ಗುಡಿ ಕೈಗಾರಿಕೆಗಳು ಕೌಶಲ್ಯಭರಿತ ಕೆಲಸಗಳು ಹೆಚ್ಚು ಮಹಿಳೆಯರು ತೊಡಗಿಕೊಂಡಿದ್ದವರಾಗಿದ್ದಾರೆ. ಇದು ಅವರ ಕುಟುಂಬದ ನಿರ್ವಹಣೆಯಲ್ಲಿ ಮುಖ್ಯ ಪಾತ್ರವಾಗಿದೆ. ಹೀಗೆ ಶತಶತಮಾನಗಳಿಂದಲೂ ಮಹಿಳೆಯ ಆರ್ಥಿಕ ವಲಯಕ್ಕೆ ತನ್ನ ಛಾಪನ್ನು ಮೂಡಿಸಿದರು ಕೂಡಾ ಅದನ್ನು ಪುರುಷ ಪ್ರಧಾನ ರಾಜಕಾರಣ ಗೌಣಗೊಳಿಸಿದೆ.

ಅನೇಕ ಸಮುದಾಯಗಳಲ್ಲಿ ಇದ್ದ ಹಾಗೆ ಹರಣ ಶಿಕಾರಿ ಮಹಿಳೆಯರು ಕುಟುಂಬದ ನಿರ್ವಹಣೆ ಮತ್ತು ಉತ್ಪಾದಕ ದುಡಿಮೆಯಲ್ಲಿ ತೊಡಗಿಕೊಂಡಿದ್ದಾರೆ. ಮಹಿಳೆಯರು ಮಾಡುವ ಪುರುಷ ಕೆಲಸಕ್ಕೆ ಹೆಚ್ಚಿನ ಹೊರೆಯನ್ನು ಹೊಂದಿದರೂ ಕೂಡಾ ಸಾಮೂದಾಯಿಕ ರೂಢಿಬದ್ಧ ತಾರತಮ್ಯ ನೀತಿಗಳು ಮಹಿಳೆಯರ ಕೆಲಸಗಳನ್ನು ಅಪಮೌಲ್ಯಗೊಳಪಡಿಸಿದೆ. ಹರಣ ಶಿಕಾರಿ ಸಮುದಾಯದಲ್ಲಿ ಒಬ್ಬ ಮಹಿಳೆ ಮಾಡುವ ಕೆಲಸವನ್ನು ಗಮನಿಸಿದಾಗ, ಬೆಳಗಿನ ಜಾವ ೪ ಗಂಟೆಗೆ ಎದ್ದು ರಾತ್ರಿ ಅವಳು ಮಲಗುವವರೆಗೆ ಒಂದಲ್ಲಾ ಒಂದು ಕೆಲಸದಲ್ಲಿ ತೊಡಗಿರುತ್ತಾಳೆ. ಮನೆಯಲ್ಲಿ ಅಡುಗೆ ಮಾಡುವುದು, ಪಾತ್ರೆ ತೊಳೆಯುವುದು, ಮಕ್ಕಳ ಪೋಷಣೆ, ವೃದ್ಧರ ಆರೈಕೆ, ಕುಡಿಯುವ ನೀರಿನ ಸಂಗ್ರಹಣೆ ಹೀಗೆ ದಿನವಿಡೀ ಅನೇಕ ಕೆಲಸಗಳಲ್ಲಿ ತೊಡಗಿರುವ ಮಹಿಳೆಯರನ್ನು ಪುರುಷರಿಗಿಂತ ಕೆಳಮಟ್ಟದಲ್ಲೇ ನೋಡಲಾಗುವುದು.

ಹರಣ ಶಿಕಾರಿ ಸಮೊದಾಯದಲ್ಲಿ ಮಹಿಳೆಯರು ಎಲ್ಲಾ ಕೆಲಸವನ್ನು ಅತ್ಯಂತ ಕ್ರೀಯಾಶೀಲತೆಯಿಂದ ಪೂರ್ಣಗೊಳಿಸುವರು ಆದರೆ ಪುರುಷರು ಅತ್ಯಂತ ಸೋಮಾರಿಗಳಾಗಿದ್ದು ಕಂಡುಬರುತ್ತದೆ. ಇಲ್ಲಿ ಮಹಿಳೆಯರು ಮಾಡುವ ಕೆಲಸವನ್ನು ಮಹಿಳೆ ಕರ್ತವ್ಯವೆಂದೆ ಭಾವಿಸಲಾಗುವುದು. ಅದನ್ನು ಹೆಣ್ಣು ಮಗು ಹುಟ್ಟಿನಿಂದಲೇ ಹೆಣ್ಣು ಮಕ್ಕಳಲ್ಲಿ ಕುಟುಂಬದಿಂದ ಕೆಲಸ ಕಾರ್ಯಗಳು ಅಂತರ್ಗತವಾಗಿ ಬರುವುದು. ಎಲ್ಲಾ ಮಹಿಳೆಯರು ಅದನ್ನು ಸ್ವೀಕೃತ ಮನಸ್ಥಿತಿಯಿಂದಲ್ಲೇ ಒಪ್ಪಿಕೊಳ್ಳುತ್ತಾರೆ. ಅಮಾರ್ತ್ಯಸೇನ್ ಹೇಳುವಂತೆ ಮಹಿಳೆ ತ್ರಿರೂಪಿ ದುಡಿಮೆಯಲ್ಲಿ ತೊಡಗಿದ್ದಾರೆ. ೧.ಪ್ರಜನೋತ್ಪತ್ತಿ ದುಡಿಮೆ, ೨.ಕೌಟುಂಬಿಕ ದುಡಿಮೆ, ೩.ಉತ್ಪಾದನಾ ದುಡಿಮೆ, "ಈ ತ್ರಿರೂಪಿ ದುಡಿಮೆಗಳಲ್ಲಿ, ಕುಟುಂಬದ ಹೊರಗೆ ಕೂಲಿ ನಾಲಿಗಾಗಿ ಮಾಡುವ ದುಡಿಮೆ ಮಾತ್ರ ಆರ್ಥಿಕ ಗಣನೆಗೆ ಸೇರುತ್ತದೆ. ಆದರೆ ಮೊದಲೆರಡು ಬಗೆಯ ದುಡಿಮೆಗಳು ಅಧಿಕವಾಗಿಯಾಗಲಿ, ಗಾತ್ರ ನಿಷ್ಪವಾಗಿಯಾಗಿಲಿ ಕ್ರಯ ನಿಷ್ಪಯಾಗಲಿ ಮಹತ್ವ ಪಡದಿಲ್ಲ, ಇದರಿಂದ ಮಹಿಳೆಯರ ದುಡಿಮೆಯೂ ದೈಹಿಕ ಶ್ರಮವೂ ಅಗೋಚರವೂ, ಅಮಾರ್ತವೂ, ಕ್ರಿಯಾರಹಿತವೂ ಆಗಿದೆ ಹರಣ ಶಿಕಾರಿ ಸಮುದಾಯದಲ್ಲಿ ತಾಯಿಯಾಗುವ ಕ್ರಿಯೆಯನೇ ಮೈಲಿಗೆ ಎಂದು ನೋಡಿದಾಗ ಹೆಣ್ಣಿಗೆ ನಿರ್ಸಗದತ್ತವಾಗಿ ದೊರೆತ ತಾಯನಕ್ಕೆ ಪುರುಷ ಪ್ರಧಾನ ಸಮಾಜದಲ್ಲಿ ಯಾವುದೇ ಬೆಲೆ ಇರುವುದಿಲ್ಲ, ಹೆರಿಗೆ ಎನ್ನುವುದು ಹೆಣ್ಣಿನ ಇನ್ನೊಂದು ಜನ್ಮವಿದ್ದಹಾಗೆ ಸಂತತಿಯ ಸಾತತ್ಯಕ್ಕೆ ಕಾರಣವಾಗುವ ಮಹಿಳೆಯ ಈ ಶ್ರಮಕ್ಕೆ ಪುರುಷ ಪ್ರಧಾನ ಸಮಾಜದಲ್ಲಿ ಯಾವುದೇ ಮೌಲ್ಯವಿಲ್ಲ. ಇದನ್ನು ಒಂದು ಕರ್ತವ್ಯವೆಂದು ಭಾವಿಸುತ್ತಾರೆ. ಹೊರತು ದುಡಿಮೆ ಎಂದು ಪರಿಗಣಿಸುವುದಿಲ್ಲ. ಹರಣ ಶಿಕಾರಿ ಸಮುದಾಯದ ಕುಟುಂಬದಲ್ಲಿ ಮಹಿಳೆ ಆರ್ಥಿಕ ಹೊಣೆಯಲ್ಲಿ ಮುಖ್ಯ ಪಾತ್ರವಹಿಸುತ್ತಾಳೆ. ಹರಣ ಶಿಕಾರಿ ಸಮುದಾಯದಲ್ಲಿ ಕಳ್ಳ ಭಟ್ಟಿ ಸರಾಯಿ ಮಾಡುವುದು ಮುಖ್ಯ ಕಸಬು ಆಗಿದೆ. ಇದು ಇವರ ಪಾರಂಪರಿಕ ವೃತ್ತಿಯಾಗಿದೆ. ಬ್ರಿಟೀಷರ ದಬ್ಬಾಳಿಕೆಗೆ ಒಳಪಟ್ಟ ಅನೇಕ ಸಮುದಾಯಗಳಲ್ಲಿ ಹರಣ ಶಿಕಾರಿ ಸಮುದಾಯವು ಒಂದಾಗಿದ್ದು, ತಮ್ಮ ಜೀವನದ ಉಳಿವಿಗಾಗಿ ಹೊಟ್ಟೆ ಪಾಡಿಗಾಗಿ ಕಳ್ಳಭಟ್ಟಿ ಸಾರಾಯಿಯನ್ನು ಮಾಡಲು ಪ್ರಾರಂಭಿಸಿದರು. ಅದು ಇಂದಿಗೂ ಕೂಡಾ ಮುಂದುವರೆದು ಕೊಂಡು ಬಂದಿದೆ. ಅಲ್ಲದೆ ಅದು ಇಂದು ಅವರ ಜೀವನಕ್ಕೆ ಮುಖ್ಯ ಆರ್ಥಿಕ ಮೂಲವಾಗಿದೆ. ಹರಣ ಶಿಕಾರಿ ಸಮುದಾಯದಲ್ಲಿ ಹೆಚ್ಚಿನ ಜನರು ಅನಕ್ಷರಸ್ಥರಾಗಿದ್ದು, ಅಲಬಾಪುರ ನಗರದ ೯೦೦ ಕುಟುಂಬಗಳಲ್ಲಿ ಕೇವಲ ೧೦ ಕುಟುಂಬಗಳು ಜನ ಸರಕಾರಿ ಹುದ್ದೆಗಳಲಿರುವುದು ಕಂಡುಬರುವುದು. ಅದು ಪುರುಷವರ್ಗಕ್ಕೆ ಮಾತ್ರ ಸೀಮಿತವಾಗಿದೆ. ಅದರಲ್ಲಿ ಮಹಿಳೆಯರ ಪ್ರಮಾಣ ನೋಡಿದಾಗ ಅಲ್ಲಿ ಮಹಿಳೆಯರು ಸಂಪೂರ್ಣವಾಗಿ ಅನಕ್ಷರಸ್ಥರಾಗಿದ್ದು ಯಾವ ಮಹಿಳೆ ಸರಕಾರಿ ಹುದ್ದೆಯಲ್ಲಿ ಕಂಡುಬರುವುದಿಲ್ಲ. ಸಂಘಟಿತ ವಲಯದಲ್ಲಿ ಪುರುಷ ಪ್ರಮಾಣವೇ ಕಡಿಮೆಯಿದ್ದಾಗ ಅಲ್ಲಿ ಮಹಿಳೆಯರ ಪ್ರವೇಶ ಶೂನ್ಯವಾಗಿರುವುದು. ಹರಣ ಶಿಕಾರಿ ಸಮುದಾಯದ ಅತ್ಯಂತ ಕೆಳ ಮತ್ತು ಕಡುಬಡತನದಿಂದ ಬಳಲುತ್ತಿದ್ದ ಕುಟುಂಬದ ಮಹಿಳೆಯರು ಮಾತ್ರ ಅಸಂಘಟಿತವಲಯದಲ್ಲಿ ದುಡಿಯುವುದು ಕಂಡುಬರುವುದು

| | | |
|---|---|---|
| ಕಳ್ಳಭಟ್ಟಿ ಸಾರಾಯಿ ಮಾರಾಟ ಮತ್ತು ಮಾಡುವಿಕೆ | ೫೪ | ೯೦ |
| ಇತರೇ ಕೆಲಸಗಳಲ್ಲಿ ತೊಡಗಿದವರು | ೫ | ೮.೩೩ |
| ಸಂಪುಟ ಕ್ಷೇತ್ರ | ೧ | ೧.೬೭ |
| ಒಟ್ಟು | ೬೦ | ೧೦೦ |

ಈ ಮೇಲಿನ ಕೋಷ್ಟಕದ ಪ್ರಕಾರ ೮ ಮಹಿಳೆಯರಲ್ಲಿ ಕೇವಲ ಒಬ್ಬಳು ಮಾತ್ರ ಸಂಘಟಿತ ವಲಯದಲ್ಲಿ ತೊಡಗಿಕೊಂಡಿದ್ದಾರೆ. ಮತ್ತು ಇತರೇ ಮನೆಗೆಲಸ ಕೂಲಿ ಕೆಲಸಕ್ಕೆ ಹೋಗುವ ಮಹಿಳೆಯ ೫ ಜನರಿಂದ ಅತ್ಯಧಿಕವಾಗಿ ಮಹಿಳೆಯರು ಕುಟುಂಬದಲ್ಲಿ ಮಾಡುವ ಕಳ್ಳಬಟ್ಟಿ ಕ್ರಿಯೆಯಲ್ಲಿ ಮಹಿಳೆಯರು ಅಧಿಕವಾಗಿ ಪಾಲ್ಗೊಂಡಿರುವರು. ಮಹಿಳೆಯರು ಮನೆಯ ಹೊರಗಡೆ ಮಾಡುವ ಕೆಲಸದಲ್ಲಿ ಆದಾಯವನ್ನು ತಂದರೂ ಕೂಡ ಆ ಹಣದ ಮೇಲೆ ಅವರಿಗೆ ಯಾವುದೇ ರೀತಿಯ ಹಕ್ಕಿರುವುದಿಲ್ಲ, ಬೆಳಗ್ಗೆ ಮನೆಯ ಕೆಲಸವನ್ನು ಮುಗಿಸಿಕೊಂಡು, ಹೊರಗೆ ಶ್ರಮದಾಯಕ ಕೆಲಸಗಳಲ್ಲಿ ದುಡಿದು ರಾತ್ರಿಯ ವೇಳೆ ಮತ್ತೆ ಮನೆಗೆಲಸದಲ್ಲಿ ತೊಡಗುವ ಮಹಿಳೆಯು ದಿನವಿಡೀ ಶ್ರಮದಾಯಕ ಕೆಲಸದಲ್ಲಿ ತೊಡಗಿರುವಳು ಆದರೆ ಪುರುಷ ಹೊರಗಡೆ ದುಡಿಯುವ ಕೆಲಸದಲ್ಲಿ ಮಾತ್ರ ತೊಡಗುವನು ಇಂಥ ಸನ್ನಿವೇಶದಲ್ಲಿ ಮಹಿಳೆಯರು ಪುರುಷರಿಗಿಂತ ಎರಡು ಪಟ್ಟು ಹೆಚ್ಚಿನ ಶ್ರಮ ಕಾರ್ಯಗಳಲ್ಲಿ ತೊಡಗಿದಂತಾಯಿತು. ಆದರೂ ಕೂಡಾ ಅವರ ದುಡಿಮೆಯ ಸಹಭಾಗಿತ್ವಕ್ಕೆ ಶ್ರಮವಿನಿಯೋಗಕ್ಕೆ ಯಾವುದೇ ಬೆಲೆಯಿರುವುದಿಲ್ಲ.

ಸರಾಯಿ ತಯಾರಿಕೆಯಲ್ಲಿ ಮಹಿಳೆಯರು ಪ್ರವೀಣರಾಗಿದ್ದು, ಅದು ಕಲೆಯ ಭಾಗವೆಂದೇ ಹೇಳಬಹುದು. ಸರಾಯಿಯನ್ನು ಮಾಡಬೇಕಾದರೆ ಮಹಿಳೆಯರು ದಿನವಿಡೀ ಒಲೆಯ ಮುಂದೆ ಕುಳಿತುಕೊಳ್ಳಬೇಕು. ಅದನ್ನು ಸರಿಯಾದ ರೀತಿಯಲ್ಲಿ ಭಟ್ಟಿ ಇಳಿಸಬೇಕು. ಒಲೆಯ ಮುಂದೆ ನಿರಂತರವಾಗಿ ಕುಳಿತುಕೊಳ್ಳುವ ಮಹಿಳೆಯರು ಅನೇಕ ಆನಾರೋಗ್ಯಕ್ಕೆ ಸಂಬಂಧಿಸಿದಂತೆ ಕಾಯಿಲೆಗಳಿಗೆ ಒಳಗಾಗಿದ್ದಾರು ಕೂಡಾ ಈ ಕ್ರಿಯೆಯಲ್ಲಿ ಮಹಿಳೆಯರು ಪಾಲ್ಗೊಳ್ಳುತ್ತಾರೆ. ಅಲ್ಲದೇ ಮಾರಾಟ ಕ್ರಿಯೆಯಲ್ಲಿ ಕೂಡಾ ಮಹಿಳೆಯರೇ ತೊಡಗುತ್ತಾರೆ. ದಿನವಿಡೀ ಸಂಪಾದಿಸಿದ ಹಣ ಸಾಯಂಕಾಲ ಪುರುಷನ ಕೈವಶವಾಗುವುದು. ಆ ಹಣದ ಮೇಲೆ ಅವಳಿಗೆ ಹಕ್ಕಿರುವುದಿಲ್ಲ. ಕುಟುಂಬದ ನಿರ್ವಹಣೆಯ ನಿರ್ಧಾರ ತೆಗೆದುಕೊಳ್ಳುವ ಪುರುಷ ದಿನವಿಡೀ ಸಂಪಾದನೆ ಕೇವಲ ಅವಳ ಒಂದು ಕೌಟುಂಬಿಕ ಜವಾಬ್ದಾರಿ ಕುಟುಂಬವೆಂಬುದನ್ನು ನಮ್ಮ ಸಂದರ್ಭದಲ್ಲಿ ಅತಿಯಾಗಿ ವೈಭವೀಕರಿಸಲಾಗಿದೆ. ಅದು ತನ್ನ ಎಲ್ಲ ಸದಸ್ಯರ ಹಿತಾಸಕ್ತಿಗಳನ್ನು ಕಾಪಾಡಿಡುವ ಸಂಸ್ಥೆ ಎಂದು ವರ್ಣಿಸಲಾಗುತ್ತಿದೆ. ಒಂದು ನೆಲೆಯಲ್ಲಿ ಇದು ಸರಿಯಿರಬಹುದು. ಅದು ತನ್ನ ಸದಸ್ಯರೆಲ್ಲರಿಗೂ ಭದ್ರತೆಯನ್ನು ಒದಗಿಸುತ್ತಿರಬಹುದು. ಆದರೆ ಅದರ ಲಿಂಗ ಸಂಬಂಧಿ ಆಯಾಮಗಳು ನಾವು ತಿಳಿದುಕೊಂಡಿರುವಷ್ಟು ಅಥವಾ ಅದಕ್ಕೆ ಆರೋಪಿಸುತ್ತಿರುವುದಷ್ಟು 'ಆದರ್ಶ' ಕೂಪದಲ್ಲೇನು ಇಲ್ಲ (ಪು-೨೭, ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು, ಡಾ.ಟಿ.ಆರ್.ಸಿ, ೨೦೦೮) ಕುಟುಂಬದಲ್ಲಿಯ ಆಹಾರ ಹಂಚುವಿಕೆಯಾಗಲಿ,

ಹಣಕಾಸು ವ್ಯವಹಾರದಲ್ಲಾಗಲಿ ನಿರ್ಧಾರ ತೆಗೆದುಕೊಳ್ಳುವಂತಾಗಲಿ ಮಹಿಳೆಯರಿಗೆ ಸಹಭಾಗಿತ್ವದ ಅವಕಾಶವಿರುವುದಿಲ್ಲ. ಕುಟುಂಬದಲ್ಲಿ ಮಹಿಳೆಯರು ಮಾಡುವ ಕೆಲಸ ಕುಟುಂಬ ಸದಸ್ಯರ ಹಿತಾಸಕ್ತಿ ಅಷ್ಟೇ ಮಹತ್ವದ್ದು ಆದರೆ ಅವಳಿಗೆ ಅದರ ಮೇಲೆ ಯಾವುದೇ ಹಕ್ಕಿರುವುದಿಲ್ಲ.

ಕಳ್ಳಭಟ್ಟಿ ಸರಾಯಿ ಮಾಡುವುದು ಕಾನೂನು ದೃಷ್ಟಿಯಲ್ಲಿ ಅಪರಾಧವಾದರೂ ಕೂಡಾ ಅವರು ಅದನ್ನು ಆಧರಿಸಿದ್ದು ತಮ್ಮ ಜೀವನದ ಉಳಿವಿಗಾಗಿ, ಅದನ್ನು ಅವರಿಂದ ಕಸಿದುಕೊಂಡಾಗ ಅವರು ಮತ್ತೆ ಅತಂತ್ರ ಸ್ಥಿತಿಗೆ ತಲಪುವಂತೆ ಆಗುವುದು. ಆದ್ದರಿಂದ ಸರಕಾರದ ಅನೇಕ ಕಾರ್ಯ ಯೋಜನೆಗಳಡಿ ಇದಕ್ಕೆ ಒಂದು ಪರ್ಯಾಯವಾದ ಹುದ್ದೆಯನ್ನು ಕಲ್ಪಿಸಿಕೊಡುವಲ್ಲಿ ತಮ್ಮ ಗಮನವನ್ನು ಹರಿಸುವುದು ಮುಖ್ಯವಾಗಿದೆ.

ಹರಿಣ ಶಿಕಾರಿ ಸಮುದಾಯದಲ್ಲಿ ಆಸ್ತಿಯ ಹಕ್ಕಿನ ಬಗ್ಗೆ ನೋಡಿದಾಗ ಮಗನಿಂದಲ್ಲೇ ವಂಶಾವಳಿಯನ್ನು ಗುರುತಿಸುತ್ತಿದ್ದು, ಪಿತೃಪ್ರಧಾನ, ಕುಟುಂಬದಲ್ಲಿ ಪಿತೃವಿನಿಂದ ಆಸ್ತಿಯು ಮಗನಿಗೆ ಸೇರುವುದು. ಅಲ್ಲಿ ಮಹಿಳೆಯರಿಗೆ ಯಾವುದೇ ರೀತಿಯ ಹಕ್ಕಿರುವುದಿಲ್ಲ. ಕುಟುಂಬದಲ್ಲಿ ಮಹಿಳೆ ತಮ್ಮ ಜೀವಮಾನ ಇಡೀ ದುಡಿದರೂ ಕೂಡಾ ಅವಳಿಗೆ ಯಾವುದರ ಮೇಲೂ ಒಡೆತನದ ಹಕ್ಕಿರುವುದಿಲ್ಲ. ಹರಣಿ ಸಿಕಾರಿ ಸಮುದಾಯದ ಸಂಪ್ರದಾಯಗಳ ಕಟ್ಟಳೆಗಳಲ್ಲಿ. ಸಿಲುಕಿರುವ ಮಹಿಳೆ ಇಂದಿಗೂ ಕೂಡಾ ಮಹಿಳೆಯರು ಮುಖ್ಯವಾಹಿನಿಯಿಂದ ತುಂಬಾ ದೂರವಿದ್ದರೆ. ಹರಣ ಶಿಕಾರಿ ಸಮುದಾಯಗಳಲ್ಲಿ ಮಹಿಳೆಗೆ ಅನೇಕ ಮಿಥ್ಯೆಗಳನ್ನು ನೀಡುವುದರ ಮೂಲಕ ಅವಳು ಯಾವುದೇ ವಿಷಯದ ಪ್ರಶ್ನೆಯನ್ನೇತ್ತದ ಹಾಗೆ ಮಾಡಿವೆ. ಪುರುಷಾಧಿಪತ್ಯವನ್ನು ಮಹಿಳೆಯರ ಮನಸ್ಥಿತಿಯು ಒಪ್ಪಿಕೊಂಡಿರುವುದು ಆದ್ದರಿಂದ ಕುಟುಂಬದ ಆರ್ಥಿಕ ನಿರ್ವಹಣೆಯಲ್ಲಿ ಮಹಿಳೆಯರ ಪಾತ್ರ ಮುಖ್ಯವಾಗಿದ್ದರೂ ಕೂಡ ಅವರ ಬಗ್ಗೆ ನಿರ್ಧಾರ ತೆಗೆದುಕೊಳ್ಳುವ ಹಕ್ಕು ಮಹಿಳೆಯರಿಗೆ ಇರುವುದಿಲ್ಲ.

**ಅಡಿಟಿಪ್ಪಣಿಗಳು**

೧. ಮಾಧವ ಐತಾಳ್; ೨೦೦೫; ಬತ್ತದ ಚಿಲುಮೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೩೯
೨. ಇಂದಿರಾ ಆರ್; ೨೦೦೨; ಮಹಿಳೆ ಸಮಾಜ ಮತ್ತು ಸಂಸ್ಕೃತಿ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೩೧
೩. ಶ್ರೀಮತಿ ಎಚ್.ಎಸ್.; ೨೦೦೭; ದಿ ಸೆಕೆಂಡ್ ಸೆಕ್ಸ್; ಪು.ಸಂ. ೧೪೫
೪. ಇಂದಿರಾ ಆರ್; ೨೦೦೨; ಮಹಿಳೆ ಸಮಾಜ ಮತ್ತು ಸಂಸ್ಕೃತಿ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೨೭
೫. ಶ್ರೀಮತಿ ಎಚ್.ಎಸ್.; ೨೦೦೨; ಗರ್ಭಾಶಯ ಮಹಿಳೆಯ ಶಕ್ತಿ ಕೇಂದ್ರ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೧೦
೬. ಮಾಹಿತಿ ನೀಡಿದರು, ಮಂಜುಳಾ ಕಾಳೆ, ವಿಜಾಪುರ
೭. ಲಕ್ಕಿ ಪೃಥ್ವಿರಾಜ ಮತ್ತು ಶಿಕಾರಿಮು ಎಚ್.ಪಿ; ೨೦೦೮; ಪಾರ್ದಿ; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು.ಸಂ. ೩೨
೮. ಇಂದಿರಾ ಆರ್; ೨೦೦೨; ಮಹಿಳೆ ಸಮಾಜ ಮತ್ತು ಸಂಸ್ಕೃತಿ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೩೩
೯. ಅದೇ, ಪು.ಸಂ. ೩೪
೧೦. ಉಷಾ ಎಂ.; ೨೦೦೪; ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೮೨

೧೧. ಜ್ಯೋತಿ ಶಶಿಕುಮಾರ; ೨೦೦೭; ಮಹಿಳಾ ಸಾಮಾಜಿಕತೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೭೮

೧೨. ಶ್ರೀಮತಿ ಎಚ್.ಎಸ್.; ೨೦೦೨; ಗರ್ಭಾಶಯ ಮಹಿಳೆಯ ಶಕ್ತಿ ಕೇಂದ್ರ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೪೮

೧೩. ಜ್ಯೋತಿ ಶಶಿಕುಮಾರ; ೨೦೦೭; ಮಹಿಳಾ ಸಾಮಾಜಿಕತೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೮೭

೧೪. ಚಂದ್ರಶೇಖರ್ ಟಿ.ಆರ್; ೨೦೦೮; ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೨೭

೧೫. ಚಂದ್ರಶೇಖರ್ ಟಿ.ಆರ್; ೨೦೦೮; ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೭೮

೧೬. ಚಂದ್ರಶೇಖರ್ ಟಿ.ಆರ್; ೨೦೦೮; ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೨೭

ಅಧ್ಯಾಯ ನಾಲ್ಕು

# ಧಾರ್ಮಿಕ ಬದುಕು

೪.೧ ದೈವಾರಾಧನೆ : ಮಹಿಳೆ

೪.೨ ಜೈವಿಕತೆ – ಮಹಿಳೆ

೪.೩ ಹಬ್ಬ ಹರಿದಿನಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ

ಭಾರತೀಯ ಸಮಾಜವು ಧಾರ್ಮಿಕ ಐಕ್ಯತೆಯನ್ನು ಹೊಂದಿದ ದೇಶ. ಧಾರ್ಮಿಕ ನಂಬಿಕೆ ಆಚರಣೆಗಳು ಮಾನವನ ಒಂದು ಪ್ರಮುಖ ಭಾಗವಾಗಿ ಸಮಾಜದಲ್ಲಿ ರೂಪಿತಗೊಂಡಿವೆ. ಭಾರತದಂತಹ ದೇಶದಲ್ಲಿ ಅನೇಕ ಧರ್ಮೀಯ ಜನರು ಒಟ್ಟಾಗಿ ಇದ್ದು, ಧಾರ್ಮಿಕ ಆಚರಣೆಗಳಲ್ಲಿ ತೊಡಗುತ್ತಾರೆ. ಧರ್ಮವು ಕೂಡ ಒಂದು ಸಾಮಾಜಿಕ ಸಂಸ್ಥೆಯಾಗಿದೆ. ಆದಿಮ ಹಂತದಲ್ಲೂ ಮಾನವ ಪ್ರತ್ಯೇಕವಾದ ಸಂಸ್ಕೃತಿಯನ್ನು ಕಟ್ಟಿಕೊಳ್ಳುವುದರ ಮೂಲಕ ಧರ್ಮದ ಪ್ರಸ್ತಾವನೆಗೆ ಮುನ್ನುಡಿಯನ್ನು ಹಾಕಿಕೊಂಡ ಮುಂದೆ ಧರ್ಮ ಬಿಟ್ಟು ಮಾನವನಿಲ್ಲ ಎಂಬ ಮನೋಧೋರಣೆಗೆ ಬಂದನು ಸಮಾಜದಲ್ಲಿ ಧರ್ಮಕ್ಕೆ ಪ್ರತ್ಯೇಕವಾದ ಸ್ಥಾನಮಾನ ಕಲ್ಪಿಸಿಕೊಟ್ಟಿದ್ದು, ಧರ್ಮ ಬಾಹಿರ ಕೃತ್ಯಗಳಲ್ಲಿ ತೊಡಗಿದ ವ್ಯಕ್ತಿಗೆ ಯಾವುದೇ ಸ್ಥಾನಮಾನಗಳಿರುವುದಿಲ್ಲ. "ಒಂದು ಸಾಮಾನ್ಯ ಅರ್ಥದಲ್ಲಿ ಧರ್ಮ ಎಂದರೆ ಸನ್ಮಾರ್ಗದಲ್ಲಿ ನಡೆಯಲು ಮಾನವರನ್ನು ಪ್ರೇರೇಪಿಸುವಂತಹ ಒಂದು ಶಕ್ತಿಯಾಗಿ ಕಾರ್ಯನಿರ್ವಹಿಸುವಂತಹ ವ್ಯವಸ್ಥೆಯಾಗಿದೆ. ಅರೆ ಸನ್ಮಾರ್ಗ ಎನ್ನುವುದು ಒಂದು ಸಾಪೇಕ್ಷಿತವಾದ ಪರಿಕಲ್ಪನೆಯಾಗಿ ಬಳಕೆಗೊಳ್ಳುತ್ತಿದೆಯೇ ಹೊರತು ಸರ್ವರಿಗೂ ಒಳಿತನ್ನು ಉಂಟುಮಾಡುವಂತಹ ರೀತಿಯಲ್ಲಿಲ್ಲ." ಸನ್ಮಾರ್ಗವೆಂಬ ವಿಷಯಕ್ಕೆ ಬಂದಾಗ ಅಲ್ಲಿ ಮಹಿಳೆ ಮತ್ತು ಪುರುಷರನ್ನು ನಡೆಸಿಕೊಳ್ಳುವ ಆಚರಣೆಗಳಲ್ಲಿ ಅದರ ಪರ ಅಭಿಪ್ರಾಯಗಳು ವ್ಯಕ್ತವಾಗುವುದು. ಧರ್ಮವು ನಿರ್ದೇಶಿಸಲ್ಪಟ್ಟ ರೂಪುರೇಷೆಗಳನ್ನು ನೋಡಿದರೆ ಅದು ಸಾಮಾಜಿಕ ಸಂದರ್ಭಕ್ಕಿಂತ ಭಿನ್ನವಾಗಿರುವುದನ್ನು ನೋಡಬಹುದು. ಧರ್ಮವು ನಿರ್ದೇಶಿಸಲ್ಪಟ್ಟ ಅಂಶಗಳನ್ನು ಪುರುಷ ಪ್ರಧಾನತೆ ತನ್ನದೇ ಆದ ರೀತಿಯಲ್ಲಿ ತಿರುಚಿಕೊಂಡಿರುವುದನ್ನು ಗಮನಿಸಬಹುದು. ಅನೇಕ ಧರ್ಮಗಳ ಸಾರವನ್ನು ಗಮನಿಸಿದರೆ ಅವು ಮಹಿಳೆ ಮತ್ತು ಪುರುಷರಿಗೆ ಸಮಾನವಾದ ಅವಕಾಶಗಳನ್ನು ನೀಡಿದರೂ ಕೂಡ ಸಮಾಜದಲ್ಲಿ ಲಿಂಗ ಸಮಾನತೆಯ ವಿರುದ್ಧವಾದ ಮನಸ್ಥಿತಿಯನ್ನು ಹೊಂದಿದೆ. ಪುರುಷರ ಪ್ರಧಾನತೆಯನ್ನು ಹೊಂದಿದ ಸಮಾಜವು ಧರ್ಮದ ಅನೇಕ ರೂಪುರೇಷೆಗಳನ್ನು ಹೆಣೆದುಕೊಂಡಿದ್ದು, ಅದನ್ನು ಮಹಿಳಾ ಪರ ವಿರೋಧಿ ವರ್ತನೆಯಾಗಿ ಬಳಸಿಕೊಂಡಿರುವುದು. ಧರ್ಮವು ಮಹಿಳೆಯನ್ನು ಎರಡು ನೆಲೆಯಲ್ಲಿ ಗುರುತಿಸುವುದು. ಒಂದು ಕಡೆ ಮಹಿಳೆಯನ್ನು ದೈವ ಪಟ್ಟಕ್ಕೆ ಏರಿಸಿದರೆ ಇನ್ನೊಂದೆಡೆ ಮಹಿಳೆಗೆ ಅನೇಕ ಕಡೆ ನಿರ್ಬಂಧನೆಗಳನ್ನು ಹೇರುವುದರ ಮೂಲಕ ಅವರ ಮೇಲೆ ನಿರಂತರವಾದ ಹಿಡಿತವನ್ನು ಸಾಧಿಸಲು ಪ್ರಯತ್ನಿಸಲಾಗುವುದು.

ಧರ್ಮದ ಸಾರ ಹೇಳುವಂತಹ ಅನೇಕ ಧರ್ಮ ಗ್ರಂಥಗಳು ಮಹಿಳೆಯರ ತಾಯ್ತನ ಮತ್ತು ಪಾವಿತ್ರ್ಯದಂತಹ ಕಲ್ಪನೆಗಳನ್ನು ಮಹಿಳೆಯರಿಗೆ ನಿರ್ದೇಶಿಸಿರುವುದು ಅದೇ ಧರ್ಮ ಗ್ರಂಥಗಳು

ಪುರುಷರ ಪಾಲಿಗೂ ನಿರ್ಬಂಧಗಳನ್ನು ಹೇರಿದ್ದರೂ ಕೂಡಾ ಅದು ಸಾಮಾಜಿಕವಾಗಿ ಅಂಗೀಕೃತವಾದ ನೆಲೆಗಳಲ್ಲೇ ಪರಿಭಾವಿಸಿಕೊಂಡಿರುವುದು. ಮಹಿಳೆ ಮತ್ತು ಪುರುಷರಿಗೆ ಪ್ರತ್ಯೇಕವಾದ ಮೌಲ್ಯಾಚಾರಣೆಗಳನ್ನು ಸಾಮಾಜಿಕ ಭಾಗವಾಗಿ ನೀಡುವುದರ ಮೂಲಕ ಅವರವರ ಕರ್ತವ್ಯಗಳನ್ನು ಉಪದೇಶಿಸುವುದು. ಧರ್ಮ ಮಹಿಳೆಯರಿಗೆ ಒಂದು ಕಡೆ ಹಕ್ಕನ್ನು, ಮಾನ್ಯತೆಯನ್ನು ನೀಡಿದರೂ ಕೂಡಾ ಇನ್ನೊಂದೆಡೆ ಅವರ ಮೇಲಿನ ಶೋಷಣೆಗೆ ಕಾರಣೀಭೂತವಾಗಿದೆ.

ಸಮಾಜದಲ್ಲಿ ಧರ್ಮದ ಅನೇಕ ರೂಢಿಗತ ಆಚರಣೆಗಳಲ್ಲಿ ಪುರುಷನದೇ ಮಹತ್ವದ ಪಾಲು ಅಲ್ಲಿ ಮಹಿಳೆಯು ಕೇವಲ ಸಾಂದರ್ಭಿಕವಾಗಿ ಆಚರಣೆಯಲ್ಲಿ ತೊಡಬಹುದು. ಧರ್ಮದ ಮೂಲಕ ಮಹಿಳೆಯರ ಮೇಲೆ ನಿಯಂತ್ರಣವನ್ನು ಹೊಂದುವುದು ಪುರುಷಾಧಿಪತ್ಯೆಯ ಒಂದು ಪ್ರಮುಖ ಹುನ್ನಾರವಾಗಿರುವುದು ಅದು ಕಾಲಕ್ರಮೇಣ ಮಹಿಳೆಯರ ಮೇಲಿನ ಶೋಷಣೆಗೆ ಕಾರಣವಾಗಿರುವುದು.

### ೪.೧ ಧೈವಾರಾಧನೆ : ಮಹಿಳೆ

ಪ್ರಾಚೀನ ಕಾಲದಲ್ಲಿ ಮಹಿಳೆಯರು ಕೃಷಿ ಪ್ರಧಾನವಾದ ಕೆಲಸದಲ್ಲಿ ತೊಡಗಿದ್ದು, ಅದು ಸಾಮಾಜಿಕ ಮತ್ತು ಆರ್ಥಿಕ ಸಂದರ್ಭದಲ್ಲಿ ಬಹಳಷ್ಟು ಮಾನ್ಯತೆಯನ್ನು ಪಡೆದಿತ್ತು. ಸಮಾಜದಲ್ಲಿ ಮಹಿಳೆಯರ ಕೆಲಸವೇ ಪ್ರಧಾನವಾಗಿತ್ತು. ಆದ್ದರಿಂದ ಮಹಿಳೆಯರನ್ನು ದೇವತೆಯ ಸ್ಥಾನದಲ್ಲಿಟ್ಟು ನೋಡಿಕೊಳ್ಳುತ್ತಿದ್ದರು. ಆದರೆ ಕಾಲಕ್ರಮೇಣ ಸಾಮಾಜಿಕ ಮತ್ತು ಆರ್ಥಿಕ ವಲಯಗಳಲ್ಲಿ ಪುರುಷ ಸ್ವಂತ ಒಡೆತನವನ್ನು ಹೊಂದಲು ಪ್ರಯತ್ನಿಸಿದನೋ ಆಗ ಕ್ರಮೇಣ ಮಹಿಳಾ ಕೇಂದ್ರಿತ ನೆಲೆಗಳು ಪುರುಷ ಪ್ರಧಾನವಾಗಿ ಸ್ಥಿತ್ಯಂತರಕ್ಕೆ ಒಳಗಾಯಿತು. ಈ ಒಂದು ಬದಲಾವಣೆಯು ಧರ್ಮಗಳ ಮೇಲೆ ಪ್ರಭಾವ ಬೀರುವುದಲ್ಲದೇ ಅಂದಿನ ಸ್ವರೂಪವನ್ನು ಬದಲಾಯಿಸಿದವು. ಈ ಹಂತದಲ್ಲಿ ಮಹಿಳೆಯರಿಗೆ ಇದ್ದ ಕೆಲವೊಂದು ಹಕ್ಕುಗಳನ್ನು ಕಿತ್ತುಕೊಂಡು ಧರ್ಮದ ಹೆಸರಿನಲ್ಲಿ ನಾಲ್ಕು ಗೋಡೆಗಳ ಮದ್ಯೆ ಬಂಧಿಸಲಾಯಿತು. ಕುಟುಂಬದಲ್ಲಿ ಮಹಿಳೆಯರಿಗೆ ತಾಯಿ, ಹೆಂಡತಿ, ಮಗಳು ಹೀಗೆ ಮುಂತಾದ ಪಾತ್ರ ಮಾದರಿಗಳನ್ನು ನೀಡುವುದರ ಮೂಲಕ ಧರ್ಮದ ಹೆಸರಿನಲ್ಲಿ ಅವುಗಳಿಗೆ ಪ್ರತ್ಯೇಕವಾದ ಮೌಲ್ಯಗಳನ್ನು ನೀಡಲಾಯಿತು. ಅವರ ಆಚರಣೆ ಹಿನ್ನೆಲೆಯಲ್ಲಿ ಮಹಿಳೆಯರ ಸಜವಾದ ಕೌಶಲ್ಯವನ್ನು / ಜ್ಞಾನವನ್ನು ಗೌಣ್ಯಗೊಳಿಸಲಾಯಿತು. "ನಿಸರ್ಗ ಪೂಜೆಯ ಪ್ರತೀಕವಾದ ಮಾತೃ ಶಕ್ತಿಯ ಪೂಜೆಯೇ ಆದಿಮಾನವನ ಮೊದಲ ಧಾರ್ಮಿಕ ಆಚರಣೆಯಾಗಿರುವ ಸಾಧ್ಯತೆ ಇದೆ. ಇದು ಜಗತ್ತಿನ ಬಹುತೇಕ ಪುರಾತನ ನಾಗರಿಕತೆಗಳಲ್ಲಿ ಬುಡಕಟ್ಟುಗಳಲ್ಲಿ ಕಂಡು ಬರುವ ಪ್ರಧಾನ ಲಕ್ಷಣವಾಗಿದೆ."[೩] ಆದ್ದರಿಂದಲೇ ಅನೇಕ ಬುಡಕಟ್ಟು ಸಮುದಾಯಗಳು ಮಾತೃ ಪ್ರಧಾನತೆಯೇ ಲಕ್ಷಣವನ್ನು ಹೊಂದಿದ್ದು, ಮುಂದೆ ಕುಟುಂಬದ ಘಟ್ಟಗಳಲ್ಲಿ ಅವು ಪುರುಷ ಪ್ರಧಾನತೆಗೆ ಒಳಗಾಗಿರುವುದನ್ನು ಕಾಣಬಹುದು. ಹೀಗೆ ಮೊದಲು ಸಮಾನವಾದ ಸ್ಥಾನಮಾನವನ್ನು ಹೊಂದಿದ ಮಹಿಳೆ ಇಂದು ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕವಾಗಿ ಪುರುಷ ನಿಯಂತ್ರಣಕ್ಕೆ

ಒಳಗಾಗಿರುವುದನ್ನು ನೋಡಬಹುದು. ಧಾರ್ಮಿಕ ಆಆಚರಣೆಗಳಾದ ಹಬ್ಬ, ಜಾತ್ರೆ, ಪೂಜೆಯಂತಹ ಕಾರ್ಯಚಟುವಟಿಕೆಯಲ್ಲೂ ತಾರತಮ್ಯವನ್ನು ಕಾಣಬಹುದು. ಪೂಜೆ ಮಾಡುವ ಸ್ಥಾನದಲ್ಲಿ ಪೂಜೆಯ ಎಲ್ಲಾ ಪೂರ್ವ ಕಾರ್ಯವನ್ನು ಮಾಡಿಕೊಂಡು ಕಟ್ಟುನಿಟ್ಟಾಗಿ ಸಜ್ಜುಗೊಳಿಸುವುದು ಮಹಿಳೆಯರು. ಪೂಜೆಯನ್ನು ಪೂರೈಸುವುದು ಪುರುಷರು. ಹೀಗೆ ಅನೇಕ ಧಾರ್ಮಿಕ ಬುದ್ಧಿ ವಿಧಾನಗಳ ಪಾಲನೆಯಲ್ಲೂ ಮಹಿಳೆಯರನ್ನು ನಿರ್ಲಕ್ಷಿಸಲಾಗಿದೆ. "ಕ್ರಿ.ಪೂ. ೨೦೦೦ ವರ್ಷಗಳಷ್ಟು ಪ್ರಾಚೀನವಾದ ವೇದ ಯುಗದಲ್ಲಿ ಮಹಿಳೆಯು ಧಾರ್ಮಿಕ ಆಚರಣೆಗಳಲ್ಲಿ ಗೌರವಾನ್ವಿತ ಸಮಸ್ಯೆಯಾಗಿದ್ದಳೆಂದು ತಿಳಿದು ಬರುತ್ತದೆ. ಆದರೆ ಸ್ವಾತಂತ್ರ್ಯ ಅಸ್ತಿತ್ವಕ್ಕೆ, ಆಯ್ಕೆಗೆ ಅವಕಾಶವಿರಲಿಲ್ಲ."[೪] ಹೀಗೆ ವೇದ ಯುಗದ ಕಾಲದಲ್ಲೂ ಮಹಿಳೆಯರನ್ನು ಧಾರ್ಮಿಕ ವಿಧಿವಿಧಾನಗಳ ಕಟ್ಟಳೆಯನ್ನು ನಿರ್ಮಿಸಿ ಅವರ ಅಸ್ತಿತ್ವಕ್ಕೆ ಬೆಲೆ ಇಲ್ಲದಂತೆ ಮಾಡಿದವು. ವೇದಗಳ ಕಾಲದಲ್ಲಿ ವೇದಗಳ ಅಧ್ಯಯನ ಮತ್ತು ಉಪನಿಷತ್ತಿನ ಬೋಧನೆಯ ಮೇಲೆ ನಿರ್ಬಂಧನೆಯನ್ನು ಏರಲಾಗಿತ್ತು. ಗಾಯತ್ರಿ ಮಂತ್ರ ಪಠಣೆಯನ್ನು ಮಹಿಳೆಯರಿಗೆ ನಿಷೇಧಿಸಲಾಯಿತು. ಹೀಗೆ ಅನೇಕ ಧಾರ್ಮಿಕ ನಂಬಿಕೆಗಳಡಿಯಲ್ಲಿ ಮಹಿಳೆಯರನ್ನು ಮಡಿ-ಮೈಲಿಗೆ ಎಂದೆಲ್ಲ ನೋಡಲಾಯಿತು. ಇನ್ನೂ ಧಾರ್ಮಿಕ ಸ್ಮೃತಿಕಾರರಾದ ಮನುವು ಸ್ತ್ರೀಯರ ಮೇಲೆ ಅನೇಕ ನಿರ್ಬಂಧನೆಗಳನ್ನು ಹಾಕುವುದರ ಮೂಲಕ ಅವಳನ್ನು ಒಬ್ಬ ವ್ಯಕ್ತಿಯಾಗಿಯೇ ಪರಿಭಾವಿಸಿಕೊಂಡಿಲ್ಲ. ಮನುವಿನ ಪ್ರಕಾರ ಸ್ತ್ರೀಯರು ಅಮಾಯಕರನ್ನು ಮಾತ್ರವಲ್ಲದೇ ಕಲಿತವರನ್ನು ದಾರಿತಪ್ಪಿಸಿ ರಾಗದ್ವೇಷಗಳ ಗುಲಾಮಳನ್ನಾಗಿಸುವಳು. ಸಾಮರ್ಥ್ಯ ಹೊಂದಿದ್ದಾರೆ ಎಂದು ನಿರ್ಣಯಿಸಿದ್ದಾನೆ. ಮಹಾಭಾರತದಲ್ಲಿ ಸ್ತ್ರೀಶಂಕೆ ಪಾಪಕಾರವಾದುದು. ಯಾವುದು ಇಲ್ಲ ಎಲ್ಲಾ ಕೆಡಕುಗಳಿಗೂ ಸ್ತ್ರೀಯೇ ಮೂಲ ಎಂದು ಹೇಳಲಾಗಿದೆ. ಹೀಗೆ ಸ್ತ್ರೀಯು ವಿನಾಶದ ದಾರಿ ಅವಳನ್ನು ನಂಬಿಕೆಗೆ ಅನರ್ಹಳು ಎಲ್ಲಾ ಚಟುವಟಿಕೆಗಳು ಎಂಬುವುದನ್ನು ಈ ಸ್ಮೃತಿಕಾರನ ಮಾತುಗಳಿಂದ ತಿಳಿದುಬರುವುದು. ಧರ್ಮವು ಆದಿಯ ಕಾಲಘಟ್ಟದಿಂದಲೂ ಮಹಿಳೆಯರಿಗೆ ತನ್ನದೇ ಆದ ಕೆಲವೊಂದು ಕಟ್ಟುಪಾಡುಗಳನ್ನು ನೀಡುವುದರ ಮೂಲಕ ಮಹಿಳೆಯರು ಪುರುಷ ವ್ಯವಸ್ಥೆಯ ಅಧೀನದಲ್ಲಿರುವಂತೆ ಮಾಡಿರುವುದು. ಅಲ್ಲದೇ ಮಹಿಳೆಯರ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಪರಿಸ್ಥಿತಿಯ ಮೇಲೂ ಪ್ರಭಾವ ಬೀರುವುದು. ಭಾರತದಾದ್ಯಂತ ಅನೇಕ ಧರ್ಮದ ಜನರಲ್ಲಿ ಭಿನ್ನವಾದ ಸಂಪ್ರದಾಯಗಳು ಇದ್ದರೂ ಇನ್ನೂ ಬೆಟ್ಟ, ಗುಡ್ಡ, ದುರ್ಗಮ ಪ್ರದೇಶಗಳಲ್ಲಿ ವಾಸಿಸುವ ಬುಡಕಟ್ಟು ಸಮುದಾಯಗಳ ಧಾರ್ಮಿಕ ನಂಬಿಕೆ ಆಚರಣೆಗಳ ಸ್ವರೂಪವು ವಿಭಿನ್ನವಾಗಿರುವುದು ಅಲ್ಲದೇ ಅವು ಸಮುದಾಯದ ಮಾನ್ಯತೆಯನ್ನು ಪಡೆದಿರುವುಗಳಾಗಿರುವುದು.

ದೇಶದ ಎಲ್ಲಾ ಕಡೆ ಹರಡಿಕೊಂಡಿರುವ ಬುಡಕಟ್ಟು ಸಮುದಾಯಗಳಲ್ಲಿ ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳು ವಿಭಿನ್ನವಾಗಿರುವುದು. ಅವರದೇ ಆದಂತಹ ಭಿನ್ನವಾದ ಸಂಸ್ಕೃತಿಯನ್ನು ರೂಪಿಸಿಕೊಂಡಿರುವರು. ಅನೇಕ ಬುಡಕಟ್ಟು ಸಮುದಾಯಗಳಲ್ಲಿ ಹುಟ್ಟು, ವಿವಾಹ,

ವೈದವ್ಯ, ಸಾವು ಮುಂತಾದ ಸಂದರ್ಭಗಳಲ್ಲಿ ಮುಕ್ತವಾದ ಅವಕಾಶ ಕಲ್ಪಿಸುವುದಲ್ಲದೇ ಅನೇಕ ನಿರ್ಬಂಧಗಳನ್ನು ಕೂಡ ಹೇರುವುದೇ ಮುಖ್ಯವಾಗಿರುವುದು. ಸಮಾಜದ ಮುಖ್ಯವಾಹಿನಿಯಿಂದ, ಶಿಕ್ಷಣದಿಂದ ದೂರವಿರುವ ಈ ಜನರು ಅನೇಕ ಮೂಢನಂಬಿಕೆ, ಸಂಪ್ರದಾಯ, ಆಚರಣೆಗಳಲ್ಲಿಯೇ ನಂಬಿಕೆಯನ್ನು ಹೊಂದುವವರಾಗಿದ್ದಾರೆ. ಈ ರೀತಿಯ ಆಚರಣೆ ಪದ್ಧತಿಗಳು ಕೆಲವೊಂದು ಬುಡಕಟ್ಟು ಸಮುದಾಯಗಳಲ್ಲಿ ಮಹಿಳೆಯರ ಲೈಂಗಿಕತೆಗೆ ಮುಕ್ತತೆ ನೀಡಿದರೆ, ಕೆಲವು ಬುಡಕಟ್ಟು ಸಮುದಾಯಗಳು ಪಾತಿವ್ರತ್ಯ ಪರೀಕ್ಷೆಯಂತಹ ಮುಂತಾದ ಆದರ್ಶ ನಾರಿಯ ಮಿಥ್ಯೆಗಳನ್ನು ಮಹಿಳೆಯರ ಮೇಲೆ ಹೇರಿರುವುದನ್ನು ನೋಡಬಹುದು. ಇಂಥಹ ಬುಡಕಟ್ಟು ಸಮುದಾಯಗಳಲ್ಲಿ ಹರಿಣಶಿಕಾರಿ ಸಮುದಾಯವು ಒಂದಾಗಿದ್ದು, ಹರಿಣಶಿಕಾರಿ ಸಮುದಾಯವು ಆದಿಯ ಕಾಲಘಟ್ಟದಿಂದ ತನ್ನ ಪರಂಪರೆಯನ್ನು ಕಾಪಾಡಿಕೊಂಡು ಬಂದಿದ್ದರೂ ಕೂಡ ಕಾಲಾನುಘಟ್ಟದಲ್ಲಿ ಅನೇಕ ರೀತಿಯ ಬದಲಾವಣೆಯ ಪರಿಸ್ಥಿತಿಗೆ ಒಳಗಾಗಿರುವುದರಿಂದ ಅಲ್ಲಲ್ಲಿ ತನ್ನ ಸಂಪ್ರದಾಯಗಳ ಆಚರಣೆಗಳ ಬಿಗಿಯನ್ನು ಸಡಿಲಿಸಿಕೊಂಡು ಬಂದಿರುವುದನ್ನು ನೋಡಬಹುದು. ಇಂತಹ ಸಂಪ್ರದಾಯಿಕ ಆಚರಣೆಯಲ್ಲಿ ಕೆಲವೊಂದು ಮಾತ್ರ ಸ್ವೀಕರಿಸುತ್ತಾ ಬಂದ ಸಮುದಾಯವು ಮಹಿಳೆಯರ ಮೇಲಿನ ಕಟ್ಟುಪಾಡುಗಳನ್ನು ಇನ್ನೂ ಉಳಿಸಿಕೊಂಡಿರುವುದು.

ಬೇರೆ ಬುಡಕಟ್ಟು ಸಮುದಾಯಗಳ ಹಾಗೆ ಹರಿಣಶಿಕಾರಿ ಸಮುದಾಯದಲ್ಲಿ ಆರು ಉಪ ಪಂಗಡಗಳಿವೆ. ಅವುಗಳೆಂದರೆ:

೧. ಖೋಡಿಯಾರ

೨. ಪಿಂಪಳಜಾ

೩. ಹರಕತಿಯಾ

೪. ಕೊರಬಿಯೊ

೫. ಸಾವಂಡಿಯೋ

೬. ಇಕೋತಿಯೇ

ಮೊದಲ ಮೂರು ಬೆಡಗಿನವರು ಅಣ್ಣ ತಮ್ಮಂದಿರ ವಂಶದವರಾಗಿದ್ದರಿಂದ ಇವರಿಬ್ಬರ ನಡುವೆ ಮದುವೆಯ ಕ್ರಿಯೆಗಳು ನಡೆಯುವುದಿಲ್ಲ. ಇವರು ಬೋಡಿಯಾರ, ಸಾವಡಿಯೋ ಮತ್ತು ಪಿಂಪಳಜಾ ಬೆಡಗಿನವರೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಬಹುದು. ಈ ಬೆಡಗುಗಳಲ್ಲಿ ವಿಭಿನ್ನವಾದ ಆಚರಣೆಗಳು, ಪದ್ಧತಿಗಳು ಕಂಡುಬರುವುದು. ಇದರಲ್ಲಿ ಜಾತಿ ಶ್ರೇಣೀಕರಣ ವ್ಯವಸ್ಥೆಯನ್ನು ಕಾಣಬಹುದು. ಮೇಲಿನ ಬೆಡುಗಗಳ ಆಧಾರದ ಮೇಲೆ ಆಯಾ ದೇವತೆಗಳನ್ನು ಪೂಜಿಸುತ್ತಾರೆ. ಇದಕ್ಕೆ ಅನೇಕ ಐತಿಹ್ಯಗಳನ್ನು ನೀಡುತ್ತಾರೆ.

೧. ಈ ಬೆಡಗಿನವರು ಬೋಡಿಯಾರ ದೇವತೆಯನ್ನು ಪೂಜಿಸುತ್ತಾರೆ. ಇವರನ್ನು ಕಾಳೆ ಎಂತಲೇ ಗುರುತಿಸುತ್ತಾರೆ.

"ಖೋಡಿಯಾರ ಬೆಡಗಿನವರು ಕುಟುಂಬದಲ್ಲಿ ಹೆಣ್ಣುಮಕ್ಕಳಿಗೆ ಆಗುವ ಮೊದಲನೇ ಮಗುವನ್ನು ದೇವಿಗೆ ಬಲಿ ನೀಡುವಂತಹ ಪದ್ಧತಿ ಇತ್ತು. ಹೀಗೆ ಕಾಲಕ್ರಮೇಣ ಈ ಪದ್ಧತಿ ಮುಂದುವರೆದುಕೊಂಡು ಬರುವಾಗ ಒಂದು ಕುಟುಂಬದಲ್ಲಿ ಒಬ್ಬ ಮಹಿಳೆಗೆ ಒಂದು ಗಂಡು ಮಗುವಾಗಿತ್ತು. ಆದರೆ ಆಕೆಯ ಗಂಡ ತೀರಿಕೊಂಡ ಸಂದರ್ಭದಲ್ಲಿ ಆ ಮಹಿಳೆಗೆ ಇದ್ದದ್ದು ಒಂದೇ ಮಗು ಆಗ ಬಲಿಕೊಟ್ಟರೇ, ಅವಳಿಗೆ ಯಾರು ಗತಿ ಇರಲಿಲ್ಲ. ಇಂತಹ ದ್ವಂದ್ವ ಪರಿಸ್ಥಿತಿಯಲ್ಲಿ ಸಿಲುಕಿದ ಮಹಿಳೆ ತನ್ನ ಮಗುವನ್ನು ಬಲಿ ಕೊಡಲು ಒಪ್ಪಲಿಲ್ಲ. ಆಗ ದೇವಿ ಕೋಪಿತಳಾಗಿ ಆ ಮಗು ಅನಾಹುತಕ್ಕೆ ಒಳಗಾಗುವುದು. ಇಂಥಹ ಪರಿಸ್ಥಿತಿಯಿಂದ ಪಾರಾಗಲು ಯಾವುದಾದರು ಉಪಾಯವನ್ನು ಹುಡುಕಬೇಕೆಂದು ಬದಾವಾ(ಕವಲು) ಹಾಕಿ ನೋಡಿದರು ಆಗ ಅವರಿಗೆ ದೊರೆತ ಉಪಾಯ ಎಂದರೆ ಮಗುವಿನ ರಟ್ಟೆಯ ಮಾಂಸವನ್ನು ತೆಗೆದು ದೇವಿಗೆ ಅರ್ಪಣೆ ಮಾಡುವುದು. ಹೀಗೆ ಮಾಡಿದ ಮಹಿಳೆಯ ಮಗು ಆರೋಗ್ಯದಿಂದ ಚೇತರಿಸಿಕೊಂಡಿತು. ಮತ್ತು ಆಕೆಯ ಮಗು ಉಳಿಯಿತು. ಅಂದರೆ ಖೋಡಿಯಾರ ಬೆಡಗಿನವರು ಈ ಪದ್ಧತಿಯನ್ನು ಇಂದಿಗೂ ಕೂಡಾ ಮುಂದುವರೆಸಿಕೊಂಡು ಬಂದಿದ್ದಾರೆ. ಸಾಂದರ್ಭಿಕವಾಗಿ ದೇವಿಗೆ ಅರ್ಪಣೆ ಮಾಡುವಂತಹ ಸಂದರ್ಭದಲ್ಲಿ ಮಗುವಿನ ರಟ್ಟೆಯ ಮಾಂಸವನ್ನು ತೆಗೆದು ಅರ್ಪಣೆ ಮಾಡುವ ಪದ್ಧತಿ ಇರುವುದು."[೫] ಎಂದು ಮಾಹಿತಿ ನೀಡಿದರು.



## ಖೋಡಿಯಾರ್ ದೇವಿಯ ಹಾಡು

"ಹಮಾರಂತೂ ದೇವಾಣು ಖೋಡಿಯಾರ್ ದೇವಿ
ಹಮಾರಂತೂ ದೇವಾಣು ಬೂಕಡಾ ಖರಾನೂಂ ದೇವಿ
ಹಮಾರಂತೂ ದೇವಾಣು ಓತರಾಮ ಡೀಲೆಮ ಆವಣ್
ಹಮಾರಂತೂ ದೇವಾಣು ಖೋಡಿಯಾರ ದೇವಿ
ಹಮಾರಂತೂ ದೇವಾಣು ಪಾಡ್ದಾ ಖರಾನೂಂ
ಹಮಾರಂತೂ ದೇವಾಣು ಖಳೆಂಪರ್ ಆವಿನ್
ಹಮಾರಂತೂ ದೇವಾಣು ಖೋಡಿಯಾರ ದೇವಿ"
ಇದನ್ನು ಹಾಡಿದವರು ಸುರೇಶ ಈಶ್ವರ ಚೌವ್ಹಾಣ, ವಿಜಾಪುರ

ಖೋಡಿಯಾರ ಬೆಡಗಿನವರ ಈ ಹಾಡಿನ ಸಾರಾಂಶವೇನೆಂದರೆ ತಮ್ಮ ಆಹಾರ ಪದ್ಧತಿಯ ಬಗ್ಗೆ, ದೇವಿಗೆ ಬೇಟೆ ನೀಡುವುದರ ಬಗ್ಗೆ, ದೇವಿಯು ಪೂಜಾರಿಯು ಮೈಮೇಲೆ ಆವರಿಸಿಕೊಂಡಿರುವುದನ್ನು ಹಾಡಿನ ರೂಪದಲ್ಲಿ ವ್ಯಕ್ತಪಡಿಸಿದ್ದಾರೆ.

ಖೋಡಿಯಾರ ದೇವಿಯ ಪೂಜೆಯನ್ನು ಈ ಬೆಡಗಿನವರು ವಿಶೇಷವಾಗಿ ಆಚರಣೆ ಮಾಡುತ್ತಾರೆ. ದೇವರ ಹೆಸರ ಮೇಲೆ ಹೋತ ಬಲಿ ಕೊಡುವುದು, ಕೊಬ್ಬರಿ, ತುಪ್ಪ ಮತ್ತು ಕರ್ಪೂರ ಈ ವಸ್ತುಗಳ ಬಳಕೆಯನ್ನು ಯತೇಚ್ಚವಾಗಿ ಮಾಡುವರು. ಖೋಡಿಯಾರ ದೇವಿಯ ಪೂಜೆಯನ್ನು

ಮಾಡಬೇಕಾದರೆ ಶಿವನ ಬೇಟೆಯನ್ನು ನೀಡುತ್ತಾರೆ. ಆಮೇಲೆ ಸಿಹಿ ತಿಂಡಿಯ ನೈವೇದ್ಯವನ್ನು ಬೆಳಗಿನ ಜಾವ ದೇವಿಗೆ ಅರ್ಪಿಸುತ್ತಾರೆ. ನಂತರ ದೇವಿಯ ಹೆಸರಿನಲ್ಲಿ ಒಂದು ಹೋತವನ್ನು ಬಲಿಕೊಡುತ್ತಾರೆ ಈ ಎಲ್ಲಾ ಕ್ರಿಯೆಯನ್ನು ಆ ಬೆಡಗಿನ ಉಪಾಧ್ಯಯನೇ ಮಾಡುತ್ತಾನೆ.

ಇಂಥಹ ಆಚರಣೆಯಲ್ಲಿ ಮಹಿಳೆಯರು ಪಾಲ್ಗೊಳ್ಳುವಂತಿಲ್ಲ. ಇದನ್ನು ಕೇವಲ ಪುರುಷರೇ ಮಾಡಬೇಕು. ಮಹಿಳೆಯರು ಮುಟ್ಟಿದರೆ ಮೈಲಿಗೆ ಎನ್ನುವಂತಹ ಸಂದರ್ಭಗಳು ಬರುತ್ತವೆ. ಆದ್ದರಿಂದ ಮಹಿಳೆಯರನ್ನು ದೇವರ ಕಾರ್ಯದಿಂದ ದೂರ ಮಾಡಲಾಗಿದೆ.

**೨. ಹರಕತಿಯಾ** : ಹರಕತಿಯಾ ಬೆಡಗಿನವರು ಭಾನು ದೇವಿಯನ್ನು ಆರಾಧಿಸುತ್ತಾರೆ. ಇವರನ್ನು ಬಾನು ಎಂತಲೇ ಕರೆಯುತ್ತಾರೆ. ಹರಕತಿಯಾ ದೇವಿಯ ಬಗ್ಗೆ ಕ್ಷೇತ್ರಧ್ಯಯನ ಸಂದರ್ಭದಲ್ಲಿ ಹಿರಿಯ ವ್ಯಕ್ತಿಯೊಬ್ಬರು ಹೇಳುವ ಪ್ರಕಾರ : "ಹರಕತಿಯ ದೇವಿಯ ಆಚರಣೆಯಲ್ಲಿ ಪ್ರಮುಖವಾದುದು ಎಂದರೆ ಬಾರುಕೋಲನ್ನು ಮೈಗೆ ಬಾರಿಸುವುದು. ದೇವಿ ಮೈಯಲ್ಲಿ ಬಂದಾಗ ಆ ಹಗ್ಗದ ಬಾರುಕೋಲನ್ನು ಮೈಗೆ ಹೊಡೆದುಕೊಳ್ಳುತ್ತಾರೆ. ಹರಕತಿಯಾ ಬೆಡಗಿನ ಒಂದು ಕುಟುಂಬದ ಒಂದು ಸಂಸಾರದಲ್ಲಿ ಮಹಿಳೆಗೆ ಬಿಟ್ಟು ಆಕೆಯ ಗಂಡ ಮತ್ತು ಆಕೆಯ ಮಗು ಅನಾರೋಗ್ಯಕ್ಕೆ ಒಳಗಾಗಿರುತ್ತಾರೆ. ಎಷ್ಟೇ ಪ್ರಯತ್ನ ಮಾಡಿದರೂ ಕೂಡ ಅವರು ಗುಣಮುಖರಾಗುವಂತೆ ಕಾಣಲಿಲ್ಲ. ಆಗ ಅವಳು ದೇವರ ಹೇಳುವ ಕಡೆಗೆ ಬಂದು ಇದಕ್ಕೆ ಕಾರಣ ಏನು ಮತ್ತು ಅದಕ್ಕೆ ಪರಿಹಾರವೇನು ಎಂದು ಕೇಳಿದಾಗ ನಿನ್ನ ಗಂಡ ಒಂದು ತಪ್ಪನ್ನು ಮಾಡಿದ್ದಾನೆ. ಆದ್ದರಿಂದ ಆ ತಪ್ಪಿಗೆ ಬಾರುಕೋಲಿನ ಏಟು ಹೊಡೆದುಕೊಳ್ಳಬೇಕು ಎಂದಾಗ ಅನಾರೋಗ್ಯದಿಂದ ಬಳಲುತ್ತಿದ್ದ ಗಂಡನಿಗೆ ಆ ಸಾಮರ್ಥ್ಯವಿರುವುದಿಲ್ಲ. ಇನ್ನೂ ಗಂಡು ಮಗು ಚಿಕ್ಕದಿರುವುದು. ಇಂತಹ ಸಂದರ್ಭದಲ್ಲಿ ಮನೆಯ ಗಂಡು ಸಂತಾನವನ್ನು ತನ್ನ ಮಡಿಲಲ್ಲಿಟ್ಟುಕೊಂಡು ಬಾರುಕೋಲು ಏಟನ್ನು ಹೊಡಿಸಿಕೊಳ್ಳುತ್ತಾನೆ. ಆಗ ದೇವಿಯ ಕೋಪ ತಣ್ಣಗಾಗಿ ಗಂಡನ ಆರೋಗ್ಯ ಚೇತರಿಸಿಕೊಳ್ಳುವುದು."[೬]

ಈ ಬೆಡಗಿನವರಲ್ಲಿ ವಿಶೇಷವಾದ ಸಂಪ್ರದಾಯ, ಆಚರಣೆಗಳು ಕಂಡುಬರುವುದು. ಇನ್ನುಳಿದ ಐದು ಬೆಡಗಿನವರ ಧಾರ್ಮಿಕ ಆಚರಣೆ ಪದ್ಧತಿಗಿಂತ ಭಿನ್ನವಾಗಿರುವುದು. ಇದರಲ್ಲಿ ಹಗ್ಗದ ಬಾರಕೋಲ ಅಥವಾ ಚರ್ಮದ ಬಾರಕೋಲನ್ನು ಪೂಜಿಸುತ್ತಾರೆ. ಹಬ್ಬ ಹರಿದಿನಗಳಲ್ಲಿ ಪೂಜಾರಿಯ ಮೈಮೇಲೆ ದೇವರು ಆವರಿಸಿದಾಗ ಈ ಬಾರಿಕೋಲಿನಿಂದ ದೇಹವನ್ನು ದಂಡಿಸಿಕೊಳ್ಳುವ ಆಚರಣೆ ಕಂಡುಬರುವುದು. ಇವರು ದೇವಿಗೆ ವಿಶೇಷವಾಗಿ ಕೋಳಿಯನ್ನು ಬಲಿ ಕೊಡುತ್ತಾರೆ. ಈ ಬೆಡಗಿನವರು ಕೋಳಿಯ ಮಾಂಸ ಮತ್ತು ಮೊಟ್ಟೆಯನ್ನು ತಿನ್ನುವುದಿಲ್ಲ. ಇಂತಹ ಅನೇಕ ಆಚರಣೆಗಳಲ್ಲಿ ಪೂಜೆ ಪುನಸ್ಕಾರಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಕಂಡುಬರುವುದಿಲ್ಲ. ಆದರೆ ಪುರುಷರ ಭಾಗವಹಿಸುವಿಕೆ ಮುಖ್ಯವಾಗಿರುವುದು. ದೈವದ ಸ್ಥಾನದಲ್ಲಿಯೇ ಒಬ್ಬ ಹೆಣ್ಣು ದೇವತೆಯನ್ನು ಆರಾಧಿಸುತ್ತಿದ್ದು, ಅದರ ಪೂಜೆ ಮಾತ್ರ ಹೆಣ್ಣಿಗೆ ಕಾರ್ಯ ನಿರ್ವಹಿಸಲು ಬಿಡದೇ ಇರುವುದು ಪುರುಷ ಮೌಲ್ಯಗಳ ಒಂದು ಸ್ಥಿತಿ ಎಂತಲೇ ಹೇಳಬಹುದು.

**ಪಿಂಪಳಜಾ :** ಪಿಂಪಳಾ ದೇವಿಯನ್ನು ಪಿಂಪಳಜಾ ಬೆಡಗಿನವರು ಪೂಜಿಸುತ್ತಾರೆ. ಇವರನ್ನು ಕಾಳೆ ಎಂದು ಕರೆಯಲಾಗುವುದು. ಹರಿಣಶಿಕಾರಿ ಸಮುದಾಯದಲ್ಲಿ ಈ ಬೆಡಗಿನವರೇ ಮುಖ್ಯವಾದ ಸ್ಥಾನವನ್ನು ಹೊಂದಿರುತ್ತಾರೆ. ಯಾವುದೇ ದೇವರ ಕಾರ್ಯದಲ್ಲಿ ಇವರ ಹಸ್ತಕ್ಷೇಪ ಮುಂಚೆ ಇರುವುದು. ಮತ್ತು ಯಾವುದೇ ಬಗ್ಗೆ ವಿಷಯದ ಬಗ್ಗೆ ನಿರ್ಧಾರ ತೆಗೆದುಕೊಳ್ಳುವಾಗಲೂ ಇವರ ಅಭಿಪ್ರಾಯ ಮುಖ್ಯವಾಗಿರುವುದು. ಇವರಲ್ಲಿ ದೇವರನ್ನು ಇಟ್ಟು ಗಂಗಾಸ್ನಾನಕ್ಕೆ ತೆಗೆದುಕೊಂಡು ಹೋಗುವ ಪದ್ಧತಿ ಇರುವುದು. ಅಂದರೆ ಪ್ರತಿ ವರ್ಷ ಮಳೆಯಾದ ನಂತರ ನದಿಯಲ್ಲಿ ಹೊಸ ನೀರು ಬಂದಾಗ ದೇವರ ಮೂರ್ತಿಯನ್ನು ಗಂಗಾಸ್ನಾನಕ್ಕೆ ಒಳಪಡಿಸುತ್ತಾರೆ. ಪಿಂಪಳಾ ದೇವಿ ಶ್ರೇಷ್ಠವಾದ ದೇವತೆಯಾಗಿರುವಳು.

ಪಿಂಪಳಾ ದೇವಿ ಪಿಂಪಳಾ ಮರ (ಅರಳಿ ಮರ)ದಲ್ಲಿ ನೆಲೆಸಿರುವಳು ಎಂಬ ಐತಿಹ್ಯವನ್ನು ಶ್ರೀ ಶಿವಲಾಲ್ ಗಂಗೂಮಟ್ಟಿಮನಿ ಸಾ. ಹೊಂಬಳ ಧಾರವಾಡ ಜಿಲ್ಲೆ ಹೇಳಿದ ರೀತಿಯಲ್ಲಿ 'ಅಡವಿ ಬೆಂಚರ ಉಪ ಸಂಸ್ಕೃತಿ ಮಾಲೆ' ಪುಸ್ತಕದಲ್ಲಿ ದಾಖಲಿಸಲಾಗಿದೆ. ಆದ್ದರಿಂದ ಅರಳೀ ಮರದ ಎಲೆಗಳನ್ನು ಪವಿತ್ರವೆಂದು ನಂಬಲಾಗುವುದು. ಮತ್ತು ಮದುವೆಗೆ ಮುಂಚೆ ಮದುಮಕ್ಕಳಿಗೆ ಬಾಸಿಂಗ ಕಟ್ಟುವ ಸಂದರ್ಭದಲ್ಲಿ ಅರಳಿ ಮರದ ಬಾಸಿಂಗವನ್ನು ಮೊದಲು ಕಟ್ಟುವರು.

ಪಿಂಪಳಾ ದೇವಿಯ ಪೂಜಾ ವಿಧಾನ: ಬೇರೆ ಬೆಡಗಿನವರ ಪೂಜಾ ವಿಧಾನಕ್ಕಿಂತ ಭಿನ್ನವಾದ ಪೂಜಾ ವಿಧಾನ ಕಂಡುಬರುವುದು. ಈ ದೇವಿಯ ಪೂಜೆಯ ಸಂದರ್ಭದಲ್ಲಿ ಓತವನ್ನು ಬಲಿಕೊಡುತ್ತಾರೆ. ಈ ಹೋತದ ಕೊಂಬುಗಳಿಗೆ ಹತ್ತಿಯ ಬತ್ತಿಯನ್ನು ತುಪ್ಪದಲ್ಲಿ ನೆನೆಸಿ ಕಟ್ಟುತ್ತಾರೆ. ಹೋತವನ್ನು ಬಲಿಕೊಡುವ ಸಂದರ್ಭದಲ್ಲಿ ಕೊಂಬುಗಳಿಗೆ ಕಟ್ಟಿದ ಬತ್ತಿಗೆ ದೀಪ ಹಚ್ಚುತ್ತಾರೆ. ವೀರಾವೇಶಕ್ಕೆ ಒಳಗಾದ ಪೂಜಾರಿ ಅದನ್ನು ತನ್ನ ಕೈಗಳಿಂದ ಆರಿಸುತ್ತಾನೆ. ಇಂತಹ ಆಚರಣೆಯಲ್ಲಿ ಪುರುಷರು ಮಾತ್ರ ಪಾಲ್ಗೊಳ್ಳುತ್ತಾರೆ. ಮಹಿಳೆಯರು ಕೇವಲ ದೂರ ನಿಂತು ನೋಡಬಹುದು. ಈ ಸನ್ನಿವೇಶದಲ್ಲಿ ಪುರುಷರ ಮೈಯನ್ನು ಮಹಿಳೆಯರು ಮುಟ್ಟಿದರೆ ಅದನ್ನು ಅಪಶಕುನ ಎಂಥಲೇ ಭಾವಿಸುತ್ತಾರೆ. ಮೈಲಿಗೆಯಾಯಿತು ಎಂದು ನಂಬುತ್ತಾರೆ.

**ಸಾವಂಡಿಯಾ:** ಈ ಬಿಡಗಿನವರು ಸರಕ್ ಸಾವಂಡಿಯಾ ದೇವಿಯನ್ನು ಪೂಜಿಸುತ್ತಾರೆ. ಇವರನ್ನು ಚೌವ್ಹಾಣ ಎಂತಲೇ ಗುರುತಿಸುತ್ತಾರೆ. ಈ ಬೆಡಗಿನವರು ಅನ್ನ ಅಥವಾ ಅಕ್ಕಿಯಿಂದ ಮಾಡಿದ ಯಾವುದೇ ಖಾದ್ಯವನ್ನು ಸೇವನೆ ಮಾಡುವುದಿಲ್ಲ. ಇವರಲ್ಲಿ ಕೂಡ ದೇವರಿಗೆ ಬೇಟೆ ನೀಡುವ ಪದ್ಧತಿಯಿದ್ದು, ಆದರೆ ಅದರ ನಿಯಮಗಳು ಭಿನ್ನವಾಗಿವೆ. ದೇವಿಗೆ ಹೋತದ ಮರಿಯನ್ನು ಬಲಿಕೊಡುವ ಸಂದರ್ಭದಲ್ಲಿ ಪೂಜಾರಿ ಮೈಮೇಲೆ ಆವರಿಸಿದ ದೇವಿಯು ಹೋತದ ಕುತ್ತಿಗೆಗೆ ಒಂದು ಚೂಪಾದ ಕತ್ತಿಯನ್ನು ಚುಚ್ಚಿ ಅದರಿಂದ ಬರುವ ನೆತ್ತರವನ್ನು ಪೂಜಾರಿ ಕುಡಿಯುತ್ತಾನೆ ಎನ್ನುವ ನಂಬಿಕೆ ಇವರಲ್ಲಿ ಇರುವುದು. ಹೀಗೆ ಪ್ರತೀ ಬೆಡಗಿನ ಆಚರಣಾ ಪದ್ಧತಿಯಲ್ಲಿ ವಿಭಿನ್ನತೆ

ಕಂಡುಬರುವುದು ಆದರೆ ಇವೆಲ್ಲ ಆಚರಣೆಗಳಲ್ಲಿ ಪುರುಷರ ಪಾತ್ರವೇ ಮುಖ್ಯವಾಗಿರುತ್ತದೆ. ಕೇವಲ ಮಹಿಳೆಯರು ದ್ವಿತೀಯ ದರ್ಜೆಯ ಮನೆಯ ಕೆಲಸಗಳಲ್ಲಿ ಸಹಾಯಕಿಯಾಗಿ ಮಾತ್ರ ಮಹಿಳೆ ಕಾರ್ಯನಿರ್ವಹಿಸಬೇಕು. ಪ್ರಧಾನವಾದ ಕೆಲಸ ಪುರುಷರದೇ ಆಗಿರುವುದು ಇಲ್ಲಿ ಮಹಿಳೆಯರ ಪ್ರವೇಶಕ್ಕೆ ಮನ್ನಣೆ ಇರುವುದಿಲ್ಲ.

## ಜೈವಿಕತೆ – ಮಹಿಳೆ

ಮನುಷ್ಯ ಮನುಷ್ಯರ ನಡುವೆ ಸಂಘರ್ಷ ಏರ್ಪಟ್ಟಾಗ ಒಂದು ಸಮುದಾಯದೊಳಗೆ ಬೇರೆ ಬೇರೆ ಪಂಗಡಗಳು ಮೇಲುಗೈ ಸಾಧಿಸಲು ನೆಡೆಸುವ ಪ್ರಯತ್ನದೊಂದಿಗೆ ಧರ್ಮ ಉಗಮವಾಯಿತು. ಎಂದು ದೇವಿ ಪ್ರಸಾದ ಚಟ್ಟೋಪಾಧ್ಯಾಯರು ಹೇಳುತ್ತಾರೆ. ಆದಿಮ ಕಾಲಘಟ್ಟದಲ್ಲಿ ಮಾನವ ನಿಸರ್ಗದ ಕೂಸು ಆಗಿದ್ದ. ನಿಸರ್ಗದ ಬಗ್ಗೆ ಸಹಜವಾಗಿ ಕುತೂಹಲವಿತ್ತು. ನಿಸರ್ಗದ ನಿಗೂಡತೆಯ ಬಗ್ಗೆ ತಿಳಿಯಲು ಪ್ರಯತ್ನಿಸುತ್ತಿದ್ದಾನೆ. ಹೀಗೆ ನಿಸರ್ಗ ಮತ್ತು ಮಾನವನ ನಡುವೆ ರೂಪಿತವಾದ ಆಶ್ಚರ್ಯಕರ ಸಂಗತಿಯನ್ನು ತಿಳಿದುಕೊಳ್ಳುವ ನಿಟ್ಟಿನಲ್ಲಿ ಆಯ್ಕೆ ಮಾಡಿಕೊಂಡ ಮಾರ್ಗಗಳೇ ಮುಂದೆ ಆಚರಣೆಗಳಾಗಿ ಧಾರ್ಮಿಕ ವಿಧಿವತ್ತಾಗಿ ಮಾನವನ ಜೀವನದ ಒಂದು ಭಾಗವಾಗಿ ಮಾರ್ಪಟ್ಟಿತು. ಅನೇಕ ಸಮುದಾಯಗಳಲ್ಲಿ ಸ್ತ್ರೀ ದೇವತೆಯನ್ನು ಆರಾಧಿಸುತ್ತಾರೆ. ಆದಿಮ ಕಾಲದಲ್ಲಿ ಮಾನವ ಸ್ತ್ರೀ ಮತ್ತು ನಿಸರ್ಗವನ್ನು ಸಮೀಕರಿಸಿ ನೋಡುವಂತಹ ಬೆಳವಣಿಗೆ ಮಹಿಳೆಯರಿಗೆ ಉಚ್ಛ ಸ್ಥಾನವನ್ನು ನೀಡಿತು. ಇದರ ಪ್ರತಿಕ್ರಿಯೆ ಸ್ವರೂಪವಾಗಿ ಅನೇಕ ಸಮುದಾಯಗಳಲ್ಲಿ ಮಾತೃ ಪ್ರಧಾನತೆಯ ಪರಿಕಲ್ಪನೆ ಬೆಳೆದು ಬಂದಿರುವುದನ್ನು ಕಾಣಬಹುದು. "ಶಕ್ತಿ ದೇವತೆಯ ಸಮೂಹ ಬೆಳೆದಂತೆ ಅವಳ ಕಲ್ಪನೆ ವಿಕಾಸವಾಗುತ್ತಾ ಹೋಯಿತು. ಕೆಲಸಗಳು ಹೆಚ್ಚುತ್ತಾ ಹೋದವು. ಮನೆ ನೋಡಿಕೊಳ್ಳಲು ಮನೆಯೊಡತಿ ಇರುವಂತೆ ಗ್ರಾಮ ನೋಡಿಕೊಳ್ಳಲು ಊರ ಮದ್ಯದ ಗ್ರಾಮ ದೇವತೆಯಾಗಿ ಹುಟ್ಟಿಕೊಂಡಳು. ಮಳೆ, ಬೆಳೆ, ದನ, ಕರು, ಮಕ್ಕಳು–ಮರಿ, ಜನರ ಆರೋಗ್ಯ ರಕ್ಷಣೆಯ ಜವಾಬ್ದಾರಿ ಇವಳದಾಯಿತು." ಹೀಗೆ ಮತ್ತೆ ಮಹಿಳೆಯನ್ನು ದೈವದ ಪಟ್ಟಕ್ಕೇರಿಸುವುದರ ಮೂಲಕ ಮಹಿಳೆಗೆ ಆರೋಗ್ಯದಾಯಿನಿ, ಸಂರಕ್ಷಣೆ ಎಂಬ ಮಿಥ್ಯೆಗಳನ್ನು ನೀಡುವುದರ ಮೂಲಕ ಧಾರ್ಮಿಕ ಕಟ್ಟುಪಾಡುಗಳು ಮಹಿಳೆಯ ಸಾಮಾಜಿಕ ಸ್ಥಿತಿಗತಿಯ ಮೇಲೆ ಹಿಡಿತವನ್ನು ಸಾಧಿಸಿದವು.

ಧಾರ್ಮಿಕ ಆಚರಣೆಗಳು ಪುರುಷ ಮನಸ್ಥಿತಿಯ ರಾಜಕಾರಣದ ಫಲವಾಗಿ ಮಹಿಳೆಯರು ಅನೇಕ ಕಷ್ಟಗಳನ್ನು ಅನುಭವಿಸಬೇಕಾಗಿದೆ. ಅಲ್ಲದೇ ಸಾಮಾಜಿಕವಾಗಿ ಜೈವಿಕ ಹಿನ್ನೆಲೆಯ ಕಾರಣದಿಂದ ಮಹಿಳೆ ಅನೇಕ ತಾರತಮ್ಯಕ್ಕೆ ಒಳಗಾಗಿರುವವಳು. ಜೈವಿಕ ನೆಲೆಯಲ್ಲಿ ಅವಳಿಗೆ ನಿಸರ್ಗದತ್ತವಾಗಿ ದೊರೆತ ಸಂತಾನೋತ್ಪತ್ತಿಯಂತಹ ಕ್ರಿಯೆಗಳು ಪುರುಷ ರಾಜಕೀಯ ಮತ್ತು ಸ್ವಂತ ಒಡೆತನದ ಹಿತಾಸಕ್ತಿಯ ದೃಷ್ಟಿಯಿಂದ ಧಾರ್ಮಿಕ ನೆಲೆಯಲ್ಲಿ ಅದನ್ನು ಒಂದು ಮೈಲಿಗೆಯಂತೆ ಗುರುತಿಸಲಾಯಿತು. "ಮಹಿಳೆಯರನ್ನು ಜೈವಿಕ ಮಿತಿಯಲ್ಲಿ ನಿರ್ಬಂಧಿಸಿದರಿಂದಾಗಿ ಅವಳನ್ನು ಭಾವನಿಷ್ಠ ವ್ಯಕ್ತಿಯನ್ನಾಗಿ

ಗುರುತಿಸುವುದು ರೂಢಿಗೆ ಬಂದಿತ್ತು. ಬುದ್ದಿ-ಪಾಂಡಿತ್ಯ ಜ್ಞಾನವೆಂಬುದು ಪುರುಷರ ಮನೆಪಾಲಾಯಿತು. ಬುದ್ದಿಯನ್ನು ಭಾವಕ್ಕೆ ಪ್ರತಿಯಾಗಿ ನಿಲ್ಲಿಸಲಾಯಿತು. ಮಹಿಳೆಯು ಭಾವನಿಷ್ಠಳಾದರೆ ಪುರುಷರು ಬುದ್ದಿ ನಿಷ್ಠರಾದರು. ಈ ಎಲ್ಲಾ ಕಾರಣಗಳಿಂದಾಗಿ ಪುರುಷರು ಶ್ರೇಷ್ಠರು ಮತ್ತು ಮಹಿಳೆಯರು ಕನಿಷ್ಠರು ಎಂಬ ಏಣಿ-ಶ್ರೇಣಿಗಳು ಸಮಾಜದಲ್ಲಿ ಉಂಟಾದವು.

ಹರಿಣಶಿಕಾರಿ ಸಮುದಾಯದಲ್ಲಿ ಆರು ಬೆಡಗುಗಳು ರಚನೆಯಾಗಿದ್ದು, ಒಬ್ಬರು ಒಂದೊಂದು ಮನೆಯ ದೇವರನ್ನು ಆರಾಧಿಸುತ್ತಾರೆ. ಈ ರೀತಿಯ ದೈವಾರಾಧನೆಯನ್ನು ನೋಡಿದರೆ ದೇವಿಯ ಬಗ್ಗೆಯ ಅನೇಕ ಕಟ್ಟುಪಾಡು, ನಂಬಿಕೆಗಳನ್ನು, ಆಚರಣೆಗಳನ್ನು ನೀಡುವ ಹರಿಣಶಿಕಾರಿ ಸಮುದಾಯದಲ್ಲಿ ಪಿಂಪಳಾ ದೇವಿಯ ಆರಾಧನೆಗೆ ಶ್ರೇಷ್ಠತೆಯ ಸ್ಥಾನವನ್ನು ಕಲ್ಪಿಸಲಾಗಿದೆ. ಪಿಂಪಳಾ ದೇವಿಯನ್ನು ಆರಾಧಿಸುವ ಬೆಡಗಿನವರು ಶ್ರೇಷ್ಠರೆಂದು ತಿಳಿಯಬೇಕಾಗುವುದು. ಈ ಬೆಡಗಿನವರಿಗೆ ಮುಂತಾದ ಆಚರಣೆಗಳಲ್ಲೂ ಪ್ರಮುಖ ಸ್ಥಾನವನ್ನು ನೀಡಲಾಗಿದೆ. ಈ ಸಮುದಾಯದ ಜನರು ಮುಖ್ಯವಾಗಿ ಹೆಣ್ಣು ದೇವತೆಗಳನ್ನು ಆರಾಧಿಸುತ್ತಾರೆ. ಈ ಹೆಣ್ಣನ್ನು ಸೃಷ್ಟಿಸಿದವನು ಪುರುಷ ಎಂದು ಪುರಾಣ ಕಥೆಗಳ ಮೂಲಕ ಅಭಿವ್ಯಕ್ತಗೊಳಿಸುತ್ತಾ ಹೋಗುವರು. ಒಂದೆಡೆ ಹೆಣ್ಣು ದೇವತೆಗೆ ಸಮುದಾಯದಲ್ಲಿ ದೈವದ ಪಟ್ಟಕ್ಕೇರಿಸಿದರೆ ಜನರು ಇನ್ನೊಂದೆಡೆ ಈ ಧಾರ್ಮಿಕ ಆಚರಣೆಯ ನೆಲೆಯಲ್ಲಿಯೇ ಮಹಿಳೆಯನ್ನು ೨ನೇ ದರ್ಜೆಯ ಪ್ರಜೆಯಾಗಿ ಅವಳ ಮೇಲಿನ ಶೋಷಣೆಗೆ ಕಾರಣೀಭೂತವಾಗಿರುವುದನ್ನು ಈ ಹೆಣ್ಣು ದೇವತೆಗಳ ಆರಾಧನಾ ಕ್ರಮದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯನ್ನೇ ಗೌಣ್ಯಗೊಳಿಸಿರುವುದು. ಮಹಿಳೆಯ ಜೈವಿಕತೆಗೆ ಸಂಬಂಧಿಸಿದಂತೆ ಅನೇಕ ವಿವರಣೆಗಳು, ನಂಬಿಕೆಗಳು ಮಹಿಳೆಯರ ಮೇಲಿನ ಶೋಷಣೆಗೆ ಕಾರಣವಾಗಿದೆ. ಮಹಿಳೆಯರು ಧಾರ್ಮಿಕ ಆಚರಣೆಗಳು ಕಟ್ಟುಪಾಡುಗಳಂಥಹ ನಿಯಮಗಳಲ್ಲಿ ಮಹಿಳೆಯರು ಕೇವಲ ಅವುಗಳ ಪಾಲಕರಾಗಿ ಕಂಡುಬಂದರೆ, ಅವುಗಳ ನಿಯಮಾವಳಿಗಳನ್ನು ಹೊರಡಿಸುವವನು ಮಾತ್ರ ಪುರುಷರನಾಗಿರುವನು. ಪುರುಷರು ಹೇರಲ್ಪಟ್ಟ ಅನೇಕ ರೀತಿಯ ಧರ್ಮಾಧಾರಿತ ಮೌಲ್ಯಗಳನ್ನು ಒಪ್ಪಿಕೊಂಡು ಮಹಿಳೆಯರು ಅನೇಕ ಮಡಿ-ಮೈಲಿಗೆ ಎನ್ನುವಂತ ಆಚರಣೆಗಳಿಗೆ ಒಳಗಾಗುವರು. ಹರಿಣಶಿಕಾರಿ ಸಮುದಾಯದಲ್ಲಿ ಮಹಿಳೆಯರಿಗೆ ಇದ್ದ ಸ್ಥಾನಮಾನವನ್ನು ಗಮನಿಸಿದಾಗ ಧರ್ಮವು ಮಹಿಳೆಗೆ ವಿಧವಾ ವಿವಾಹದಂತಹ ಅನೇಕ ಆಚರಣೆಗಳಿಗೆ ಅವಳ ಒಪ್ಪಿಗೆಯ ಆಧಾರದ ಮೇಲೆ ನಡೆಯಬೇಕು ಎನ್ನುವಂತಹ ಧೋರಣೆ ಮಹಿಳೆಯರಿಗೆ ಹಕ್ಕನ್ನು ನೀಡಿದೆ. ನಿಸರ್ಗದ ಸಹಜ ಕ್ರಿಯೆಗಳಾದ ಹುಟ್ಟು, ಸಾವು, ಹೆರಿಗೆ, ಋತುಮತಿಯಾಗುವಿಕೆ ಮುಂತಾದ ಕ್ರಿಯೆಗಳನ್ನು ಮೈಲಿಗೆ ಎಂತಲೇ ತಿಳಿಯಲಾಗುವುದು. ಹರಿಣಶಿಕಾರಿ ಸಮುದಾಯದಲ್ಲಿ ಮಹಿಳೆಯರನ್ನು ಪ್ರಮುಖವಾಗಿ ನಿಯಂತ್ರಿಸುವುದು ಧರ್ಮ. ಅದರ ಎಲ್ಲಾ ನಿಯಮಾವಳಿಗಳನ್ನು ರಚಿಸಿಕೊಂಡವನೇ ಪುರುಷ. ಪುರುಷನ ಈ ಧರ್ಮ ರಾಜಕಾರಣದ ಹುನ್ನಾರವನ್ನೇ ಒಂದು ಮುಖ್ಯವಾದ ಮೌಲ್ಯ ಎಂತಲೇ ಪರಿಭಾವಿಸಿಕೊಂಡ ಮಹಿಳೆಯರು ಅದನ್ನು ಅಂತರ್ಗತವಾಗಿಸಿಕೊಂಡಿದ್ದಾರೆ. ಪುರುಷ ಪ್ರಧಾನದ

ಅನೇಕ ಮಿಥ್ಯೆಗಳನ್ನು ಒಡೆಯಲು ಪ್ರಯತ್ನಿಸುವಾಗ ಮಹಿಳೆಯರನ್ನು ಧರ್ಮ ಬಾಹಿರ ಕೃತ್ಯಗಳಲ್ಲೂ ತೊಡಗಿಸಿವರುವವರು ಎಂಥಲೇ ಪರಿಭಾವಿಸಿಕೊಳ್ಳುವುದರಿಂದ ಸಮುದಾಯದಲ್ಲಿ ಅದೊಂದು ಕೆಟ್ಟ ಅವಮಾನ. ಈ ಅವಮಾನವನ್ನು ಸಹಿಸಿಕೊಳ್ಳಲು ಸಿದ್ಧರಿರುವುದಿಲ್ಲ. ಅಲ್ಲದೇ ಸಮುದಾಯದ ಅನೇಕ ಧಾರ್ಮಿಕ ಆಚರಣೆ ಸಂದರ್ಭದಲ್ಲಿ ಅವರನ್ನು ಯಾವುದೇ ಕಾರ್ಯಕ್ಕೂ ಸೇರಿಸುವುದಿಲ್ಲ. ಅದು ಆ ಸಮುದಾಯದ ಪುರುಷನಿಗೆ ಒಂದು ದೊಡ್ಡ ಅವಮಾನದ ಸಂಗತಿಯಾಗಿರುವಾಗ ಅಲ್ಲಿ ಮಹಿಳೆಯರ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವುದು ಮುಖ್ಯವಾಗಿರುವುದು.

**ಹುಟ್ಟು :** ಹರಿಣಶಿಕಾರಿ ಸಮುದಾಯದಲ್ಲಿ ಮಗುವಿನ ಹುಟ್ಟಿನ ಬಗ್ಗೆ ಸಂತೋಷವನ್ನು ಹೊಂದಿದರೆ, ಇನ್ನೊಂದು ಮಡಿ–ಮೈಲಿಗೆ ಎನ್ನುವ ಪದ್ಧತಿಗಳಿಗೆ ಮಹಿಳೆ ಒಳಗಾಗುವಳು. ಮಗುವಿನ ಹುಟ್ಟುವಿಕೆ ಕಾರಣವಾದ ತಂದೆಗೆ ಯಾವುದೇ ನಿರ್ಬಂಧವನ್ನು ಹೇರಿರುವುದಿಲ್ಲ. ಮಗುವಿನ ಜನ ನಂತರ ತಾಯಿ ಮತ್ತು ಮಗುವನ್ನು ಮುಟ್ಟುವುದು ಮೈಲಿಗೆಯಂತೆ ಭಾವಿಸುವರು. ಮಗು ಹುಟ್ಟಿದ ೫ ದಿನಗಳವರೆಗೆ ಕುಟುಂಬದ ಯಾರೋ ಸದಸ್ಯರು ಮಗುವನ್ನು ಮುಟ್ಟುವುದಿಲ್ಲ ಮಗುವಿಗೆ ಒಂದು ಒಳ್ಳೆಯ ಬಟ್ಟೆಯನ್ನು ಧರಿಸುವುದಿಲ್ಲ. ಮಗು ಹುಟ್ಟಿದ ಐದನೇ ದಿನಕ್ಕೆ ಒಂದು ಕಾರ್ಯವನ್ನು ಮಾಡುವರು. ಇಲ್ಲಿ ಮಗುವಿನ ಕೇಶ ಮುಂಡನೆ ಮಾಡಲಾಗುವುದು. ಅದು ಸ್ವತಃ ಮಹಿಳೆಯೇ ಈ ಕಾರ್ಯವನ್ನು ಮಾಡಬೇಕು. ಈ ಐದಟ್ಟಿ ಕಾರ್ಯಕ್ರಮಕ್ಕಿಂತ ಮುಂಚೆ ಮಗುವನ್ನು ಮನೆಯೊಳಗೆ ತಂದರೆ ಅದು ಮನೆಗೆ ಶ್ರೇಯಸ್ಸಲ್ಲ ಎಂದು ಭಾವಿಸುತ್ತಾರೆ. ಐದನೇ ದಿನಕ್ಕೆ ಮಹಿಳೆ ಆ ಮಗುವಿನ ಕೊಳೆ ಬಟ್ಟೆಯನ್ನು ಹೊರಗೆ ಎಸೆದು ಮಗು ಮತ್ತು ತಾಯಿಗೆ ಎಣ್ಣೆಯ ಸ್ನಾನವನ್ನು ಮಾಡಿಸುವರು. ಐದನೇ ದಿನಕ್ಕೆ ಮಗುವಿನ ನಾಮಕರಣ ಮಾಡುವರು. ಇದರಲ್ಲಿ ಮಹಿಳೆಯರು ಮಾತ್ರ ಪಾಲ್ಗೊಳ್ಳುವರು. ಮಗುವಿನ ನಾಮಕರಣದ ಕಾರ್ಯ ನೆರವೇರುವವರೆಗೂ ತಾಯಿಯಾದವಳು ಮಗುವಿಗೆ ಹಾಲು ಕುಡಿಸುವಂತಿಲ್ಲ. ಮತ್ತು ಕಾರ್ಯದ ಮುಕ್ತಾಯದವರೆಗೂ ಹಸಿ ಬಟ್ಟೆಯಲ್ಲಿ ಕೂಡಬೇಕು. ಈ ಸಂದರ್ಭದಲ್ಲಿ ಮಗುವಿನ ಕೈಕಾಲಿಗೆ ಕರಿಮಣಿ ಕಟ್ಟಿ ತುಪ್ಪದ ದೀಪ ಹಚ್ಚುವರು. ಈ ಕಾರ್ಯಕ್ರಮವನ್ನು "ಜಣೇಲಾನು ಪೂಜವಾನು" ಎಂದು ಕರೆಯುತ್ತಾರೆ. ಈ ಕಾರ್ಯಕ್ರಮಕ್ಕೆ ಮಾಡಿದ ಅಡುಗೆಯನ್ನು ಪುರುಷರು ತಿನ್ನುವುದಿಲ್ಲ. ಅದು ಮೈಲಿಗೆ ಆಹಾರ ಎನ್ನುವಂತಹ ನಂಬಿಕೆಯೇ ಇದಕ್ಕೆ ಕಾರಣವಾಗಿರುವುದು.

ಹರಿಣಶಿಕಾರಿ ಸಮುದಾಯವು ದೈವಾರಾಧನೆಯಲ್ಲಿ ಹೆಚ್ಚು ನಂಬಿಕಯಿಟ್ಟವರು. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಸಂದರ್ಭದಲ್ಲಿ ಮಡಿ ಮೈಲಿಗೆಯಂತಹ ಆಚರಣೆಗಳನ್ನೇ ಅನುಸರಿಸುವರು. ಇಂತಹ ಆಚರಣೆಗೆ ಒಳಗಾಗದ ಕುಟುಂಬಕ್ಕೆ ಒಳ್ಳೆಯದಾಗುವುದಿಲ್ಲ ಎಂಬ ನಂಬಿಕೆ ಅವರ ಮನದಾಳದಲ್ಲಿ ನೆಲೆಸಿಕೊಂಡಿದೆ. ಆದ್ದರಿಂದ ಪ್ರತಿಯೊಂದು ಕಾರ್ಯಚಟುವಟಿಕೆಯಲ್ಲಿ ಮಡಿ ಮೈಲಿಗೆಯಂತಹ ಆಚರಣೆಗಳು ಕಂಡುಬರುವುದು. ಅದರಲ್ಲೂ ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ ಮಹಿಳೆ ಮತ್ತು ಪುರುಷರಿಗೆ ಇಂತಹ ಆಚರಣೆಯ ಪ್ರಯೋಗದಲ್ಲಿ ಭಿನ್ನ–ವಿಭಿನ್ನವಾಗಿವೆ. ಹರಿಣಶಿಕಾರಿ

ಸಮುದಾಯದಲ್ಲಿ ಮಹಿಳೆಯರಿಗಿಂತ ಪುರುಷರಿಗೆ ಭೌತಿಕ ಮಾನ್ಯತೆಯನ್ನು ನೀಡಿದ್ದು, ಮಹಿಳೆಯರು ಯಾವುದೇ ಆಚರಣೆಯಲ್ಲಿ ಪಾಲ್ಗೊಳ್ಳಲು ಅವರಿಗೆ ಅವಕಾಶವಿಲ್ಲ. ಅಂದರೆ ದೈವ ಆರಾಧನೆ ಸಂದರ್ಭ ಬಂದಾಗಲೂ ಮಡಿ, ಮೈಲಿಗೆಯೆನ್ನುವಂಥ ಆಚರಣೆಯ ಪ್ರಭಾವ ಮಹಿಳೆಯರ ಮೇಲೆ ಇರುವುದನ್ನು ನೋಡಬಹುದು. ಇಂದಿಗೂ ಕೂಡ ಮಗುವಿನ ಹುಟ್ಟಿನ ನಂತರ ಮಗು ಗಂಡಾಗಿದ್ದರೆ ಅಧಿಕ ಬೆಲೆಯುಳ್ಳ ಸಿಹಿಯನ್ನು ಹಂಚುತ್ತಾರೆ. ಹೆಣ್ಣು ಮಗುವಾದರೆ ಕಡಿಮೆ ಬೆಲೆ ಹೊಂದಿದ ಸಿಹಿ ತಿಂಡಿಯನ್ನು ಹಂಚುತ್ತಾರೆ. ಕುಟುಂಬದಲ್ಲಿ ಹೆಣ್ಣು ಮತ್ತು ಗಂಡು ಎಂಬ ತಾರತಮ್ಯ ಹುಟ್ಟಿನಿಂದಲೇ ಬೆಳೆದು ಬರುವುದುದನ್ನು ಕಾಣಬಹುದು. ಆಹಾರದ ಸೇವನೆಯಿಂದ ಮೂಲಭೂತ ವಸ್ತುಗಳ ಪೂರೈಕೆಯವರೆಗೂ ತಾರತಮ್ಯ ಕಂಡುಬರುವುದು. ಈ ರೀತಿಯ ಸೂತಕದ ಆಚರಣೆಯಲ್ಲಿ ಮಹಿಳೆಯರು ಅನೇಕ ಕಷ್ಟಗಳನ್ನು ಅನುಭವಿಸುವರು. ಅಲ್ಲದೇ ಅನೇಕ ಆರೋಗ್ಯಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಅನುಭವಿಸುವರು.

ಪ್ರಾಚೀನ ಕಾಲದಲ್ಲಿ ಕೂಡಾ ಹೆಣ್ಣೂ ಮಗುವಿಗಿಂತ ಗಂಡು ಮಗುವಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿರುವುದನ್ನು ನೋಡಬಹುದು. "ಪುರಾಣೇತಿಹಾಸಗಳಲ್ಲೂ ಹೆಣ್ಣು ಕೂಸನ್ನು ಅನಾದರದಿಂದ ಕಂಡಿರುವ ಸಂಗತಿಗಳಿವೆ. ಅಥರ್ಣವೇದದ ಐದನೇ ಅಧ್ಯಾಯದಲ್ಲಿ ಹೆಣ್ಣು ಮಗು ಬೇಡವೆಂದು ಪ್ರಾರ್ಥಿಸುವ ಶ್ಲೋಕಗಳಿವೆ. ಹೆಣ್ಣು ಮಗುವನ್ನು ಬೇರೆ ಎಲ್ಲಿಯಾದರೂ ಹುಟ್ಟಿಸಲಿ ನನಗೆ ಮಾತ್ರ ಗಂಡು ಮಗುವನ್ನು ದಯಪಾಲಿಸಲಿ ಎಂಬ ಅರ್ಥ ಬರುವ ಸಾಲುಗಳು ಇದೇ ಗ್ರಂಥದ ಆರನೇ ಅಧ್ಯಾಯದಲ್ಲಿ ಗರ್ಭ ಹೊತ್ತ ತಾಯಿಯ ರಕ್ಷಣೆಗೆಂದೇ ವಿಶೇಷ ಆಚರಣೆಯನ್ನು ಹೇಳಲಾಗಿದೆ. ತಾಯಿಯ ಗರ್ಭದಲ್ಲಿರುವ ಗಂಡು ಮಗುವನ್ನು ದೃಷ್ಟಶಕ್ತಿಗಳು ಹೆಣ್ಣಾಗಿ ಪರಿವರ್ತಿಸದಿರಲಿ ಎಂದೇ ಪ್ರಾರ್ಥನೆಯನ್ನು ಮಾಡಲಾಗುತ್ತದೆ."[೭]

ಮಗುವಿನ ಜನನದ ನಂತರ ಐದನೇ ದಿನಕ್ಕೆ ನಾಮಕರಣ ಮಾಡಿದ ನಂತರ ೧೫ನೇ ದಿನಕ್ಕೆ ಖಂಡೋ ಸಮಾರಂಭ ಮಾಡುವರು. ಈ ಸಮಾರಂಭದಲ್ಲಿ ಮಾಂಸದ ಅಡುಗೆಯನ್ನು ಮಾಡುವರು. ಮತ್ತು ಹಿರಿಯರು ತಮ್ಮ ಬೆಡಗಿನ ಕುಲದೇವರನ್ನು ಪೂಜಿಸಿ ಗಂಡು ಮಗುವಾಗಿದ್ದರೆ ಉಡದಾರವನ್ನು ಕಟ್ಟುವರು. ದೆವ್ವ, ಮಾಟ, ಮಂತ್ರದ ಬಗ್ಗೆ ಅಪಾರವಾದ ನಂಬಿಕೆಯನ್ನು ಹೊಂದಿದ್ದಾರೆ.

ಬುಡಕಟ್ಟು ಸಮುದಾಯಗಳಲ್ಲಿ ಗರ್ಭಿಣಿ ಮಹಿಳೆಯರ ಬಗ್ಗೆ ಅನೇಕ ಮೂಡನಂಬಿಕೆಗಳಿದ್ದು, ಹರಿಣಶಿಕಾರಿ ಸಮುದಾಯದಲ್ಲಿ ಗರ್ಭಿಣಿ ಮಹಿಳೆಯರಿಗೆ ಕೆಲವು ಆಚರಣೆಗಳಿವೆ. ಹರಿಣಶಿಕಾರಿ ಸಮುದಾಯದಲ್ಲಿ ಮಹಿಳೆಯ ಮೊದಲ ಹೆರಿಗೆ ಗಂಡನ ಮನೆಯಲ್ಲಿಯೇ ಆಗುವುದು. ಹರಿಣಶಿಕಾರಿ ಸಮುದಾಯದ ಮಹಿಳೆ ಗರ್ಭಿಣಿಯಾದಾಗ ಮೂರು ತಿಂಗಳ ಸೀಮಂತ ಕಾರ್ಯವನ್ನು ಮಾಡುವರು. ಈ ಸಮಾರಂಭದಲ್ಲಿ ಮಹಿಳೆಯರಿಗೆ ಹಸಿರು ಬಳೆ, ಸೀರೆ ಮತ್ತು ಹಣ್ಣು-ಹಂಪಲು ಕೊಟ್ಟು ಉಡಿ

ತುಂಬುವರು. ಈ ಕಾರ್ಯದ ನಂತರ ಮಹಿಳೆಗೆ ಯಾವುದೇ ಪೂಜೆಯಲ್ಲಿ ಭಾಗವಹಿಸಲು ಅನುಮತಿ ಇರುವುದಿಲ್ಲ. ಗರ್ಭಿಣಿ ಮಹಿಳೆಯರ ಆಸೆ-ಆಕಾಂಕ್ಷೆಯನ್ನು ಕೇವಲ ಮದ್ಯಮ ಮತ್ತು ಮೇಲ್ವರ್ಗದ ಕುಟುಂಬಗಳಲ್ಲಿ ಅಷ್ಟೇ ಪೂರೈಸಲಾಗುವುದು. ಉಳಿದ ಕುಟುಂಬಗಳು ಬಡತನದ ಹೊರೆಯನ್ನು ಹೊಂದಿದ್ದು, ಕುಟುಂಬದ ನಿರ್ವಹಣೆಯಲ್ಲಿ ಮಹಿಳೆಯೇ ತೊಡಗಿರುವುದರಿಂದ ಗರ್ಭಿಣಿ ಮಹಿಳೆಯ ಬೇಡಿಕೆ ತೃಪ್ತಿದಾಯಕವಾಗಿರುವುದಿಲ್ಲ. ಗರ್ಭಿಣಿ ಮಹಿಳೆಯರನ್ನು ಮನೆಯ ಹೊರಗೆ ಅಲ್ಲಿ ಇಲ್ಲಿ ಸುತ್ತಾಡಲು ಬಿಡುವುದಿಲ್ಲ. ಏಕೆಂದರೆ ಗರ್ಭಿಣಿ ಮಹಿಳೆಯರಿಗೆ ಬಹುಬೇಗನೇ ದೆವ್ವದ ಕಾಟ ಕಾಡುವುದೆಂಬ ನಂಬಿಕೆ ಇರುವುದು.

ಹರಿಣಶಿಕಾರಿ ಸಮುದಾಯದಲ್ಲಿ ಮಹಿಳೆಯ ಬಾಣಂತಿತನಕ್ಕೆ ಸಂಬಂಧಿಸಿದಂತೆ ಅನೇಕ ಧಾರ್ಮಿಕ ನಂಬಿಕೆಗಳು ಕಟ್ಟುಪಾಡುಗಳನ್ನು ಮಹಿಳೆಯರು ಅನುಕರಿಸುತ್ತಿದ್ದಾರೆ. ಇಂತಹ ಧಾರ್ಮಿಕ ಆಚರಣೆಗಳು ಮಹಿಳೆಯರ ಆರೋಗ್ಯದ ಮೇಲೂ ಪರಿಣಾಮ ಬೀರುವವು. ಮಹಿಳೆಯ ಬಾಣಂತಿತನಕ್ಕೆ ಪ್ರತ್ಯೇಕವಾದ ಗುಡಿಸಲು ನಿರ್ಮಿಸುವರು. ಇಂತಹ ಪದ್ಧತಿಯು ಸಾಮಾನ್ಯವಾಗಿ ಎಲ್ಲಾ ಬುಡಕಟ್ಟು ಸಮುದಾಯಗಳಲ್ಲಿ ಕಂಡಬರುವುದು. ಈ ಸಮುದಾಯದ ಮಹಿಳೆ ಮಗುವಿನ ಜನನದ ಸಮಯಕ್ಕಿಂತ ಮುಂಚೆ ತನಗೆ ಬೇಕಾದ ಬಟ್ಟೆ-ಬರೆ ಹಾಗೂ ವಸ್ತುಗಳ ಸಂಗ್ರಹಣೆ ಮಾಡಿಕೊಂಡಿರುವಳು. ಪ್ರಸವದ ಬೇನೆ ಶುರುವಾದಾಗ ಅವಳಿಗೋಸ್ಕರ ನಿರ್ಮಿಸಿದ ಗುಡಿಸಲೊಳಗೆ ಹೋಗಿ ತನ್ನ ಪ್ರಸವವನ್ನು ತಾನೇ ಮಾಡಿಕೊಳ್ಳಬೇಕು. ಮಗುವಿನ ಕರಳು ಬಳ್ಳಿಯನ್ನು ತನ್ನ ಬಳಿ ಇರುವ ಬ್ಲೇಡು, ಗಾಜಿನ ಚೂರು, ಬಳೆಯ ಚೂರುಗಳಿಂದ ತನ್ನ ಉಗುರು ಮೇಲೆ ಇಟ್ಟು ಕತ್ತರಿಸುವುದು. ಮಗು ಕರಳು ಬಳ್ಳಿಯಿಂದ ಬೇರ್ಪಟ್ಟಾಗ ಮಾಸವನ್ನು ಭೂಮಿಯಲ್ಲಿ ಹೂತು ಎಲ್ಲವನ್ನು ಸ್ವಚ್ಛಗೊಳಿಸುವಳು ಅವಳು ಮೈಲಿಗೆ ಎಂದು ಮೂರು ತಿಂಗಳವರೆಗೆ ಸೂತಕವೆಂದು ಮುಟ್ಟುವುದಿಲ್ಲ. ಆ ಮಹಿಳೆಯ ಆಹಾರದ ಸೇವನೆಗೆ ಮಣ್ಣಿನ ತಟ್ಟೆ, ಮಣ್ಣಿನ ಮಡಕೆಗಳನ್ನು ನೀಡುವರು ಇದರಲ್ಲಿ ಅವರು ಆಹಾರವನ್ನು ಸೇವಿಸಬೇಕು. ಹೆರಿಗೆಯ ಸಮಯದಲ್ಲಿ ತೊಂದರೆಯಾದರೆ ಆಸ್ಪತ್ರೆಗೆ ಕರೆದುಕೊಂಡು ಹೋಗುವುದಿಲ್ಲ. ಏಕೆಂದರೆ ಸಮುದಾಯದ ನಂಬಿಕೆ ಪ್ರಕಾರ ಮಹಿಳೆ ಹೆರಿಗೆಯ ಸಂದರ್ಭದಲ್ಲಿ ಏನಾದರೂ ತೊಂದರೆಯಾದರೆ ಅದಕ್ಕೆ ಗಂಡ ಮತ್ತು ಹೆಂಡತಿಯರನ್ನು ಆರೋಪಿಸುತ್ತಾರೆ. ಇವರಲ್ಲಿ ಯಾರಾದರೂ ಒಬ್ಬರೂ ಹಾದರ ಮಾಡಿದರೆ ಈ ರೀತಿಯ ತೊಂದರೆಯಾಗುವುದೆಂಬ ನಂಬಿಕೆ ಇರುವುದು. ದೈವದ ಎದುರಿನಲ್ಲಿ ಅವರಿಬ್ಬರಲ್ಲಿ ಒಬ್ಬರು ತಮ್ಮ ತಪ್ಪನ್ನು ಒಪ್ಪಿಕೊಂಡು ದೇವರ ಹೆಸರಿನಲ್ಲಿ ದಂಡವನ್ನು ಕಟ್ಟಬೇಕು ಇದು ಕುಲದೇವರ ಶಾಪ ಎಂದು ನಂಬುತ್ತಾರೆ.

"ಮಗು ಮತ್ತು ತಾಯಿಯ ಹಾರೈಕೆಯಲ್ಲಿ ಯಾರೂ ಸಹಾಯ ಮಾಡುವುದಿಲ್ಲ. ಮಗು ಹುಟ್ಟಿದ ೩ & ೫ ನೇ ದಿನಕ್ಕೆ ಸ್ನಾನವನ್ನು ತಾಯಿಯೇ ಮಾಡಿಸಬೇಕು. ಹುಟ್ಟಿದ ಮಗುವಿಗೆ ಎಣ್ಣೆ ಸವರದೇ ತಣ್ಣೀರಿನ ಸ್ನಾನವನ್ನು ಮಾಡಿಸಿ ತಾನೂ ಮಾಡುತ್ತಾಳೆ. ನಂತರ ಬಟ್ಟೆ ಸರಾಯಿಯನ್ನು

ಕುಡಿಯುತ್ತಾಳೆ. ಬಟ್ಟೆ ಸರಾಯಿಯ ಕಾವಿಗೆ ತಣ್ಣೀರಿನ ಪರಿಣಾಮ ಆಗುವುದಿಲ್ಲವೆಂದು ನಂಬಿಕೆ."[೮] ಬಾಣಂತಿ ಮಹಿಳೆಗೆ ಜೋಳದ ರೊಟ್ಟಿ, ತುಪ್ಪ, ಬೆಲ್ಲವನ್ನು ತಿನ್ನಲಿಕ್ಕೆ ನೀಡುವರು. ಕೆಲವೊಂದು ಬಡ ಕುಟುಂಬಗಳಲ್ಲಿ ಖಾರಾ ಮತ್ತು ರೊಟ್ಟಿಯನ್ನು ನೀಡುವರು ಹೀಗೆ ಆಹಾರದ ಸೇವನೆಯಲ್ಲೂ ಅನೇಕ ರೂಢಿಗತ ಸಂಪ್ರದಾಯವನ್ನು ಮುಂದುವರೆಸಿಕೊಂಡು ಬಂದಿರುವುದರಿಂದ ಮಹಿಳೆಯರ ಆರೋಗ್ಯದ ಮೇಲೂ ಪರಿಣಾಮ ಬೀರುವುದು.

ಮಹಿಳೆಯ ಆಹಾರದ ಸೇವನೆಯಿಂದ ಅವಳ ಏನು ಮಾಡಬೇಕು? ಏನು ಮಾಡಬಾರದೆಂಬ ಕಟ್ಟುಪಾಡನ್ನು ಸಮುದಾಯದ ಧಾರ್ಮಿಕ ವಿಧಿವತ್ತಾದ ನಿಯಮಗಳನ್ನು ಮಹಿಳೆಯರ ಮೇಲೆ ಏರುವುದರ ಮೂಲಕ ಅನೇಕ ದ್ವಂದ್ವತೆಗೆ ಕಾರಣವಾಗಿರುವುದು. ನಿಸರ್ಗದತ್ತಾಗಿ ಮಹಿಳೆಗೆ ದೊರೆತ ಸಂತಾನೋತ್ಪತ್ತಿಯ ಕ್ರಿಯೆಯನ್ನು ಕೂಡಾ ಧರ್ಮವು ಸೂತಕವೆಂದು ಪರಿಭಾವಿಸುವ ಮೂಲಕ ಮಹಿಳೆಯ ಶೋಷಣೆಗೆ ನಾಂದಿಯಾಗಿದೆ. ಧಾರ್ಮಿಕ ಕಟ್ಟು ಪಾಡುಗಳು ಮೌಲ್ಯಗಳು ಮಹಿಳೆಯರಿಗೆ ಧಾರ್ಮಿಕ ನಂಬಿಕೆಗಳಿಂದ ಚೌಕಟ್ಟನ್ನು ನಿರ್ಮಿಸಿರುವುದರಿಂದ ಕುಟುಂಬದಲ್ಲಿ ಅವರ ಸ್ಥಾನಮಾನ ಕುಂಠಿತವಾಗಿರುವುದು.

"ಮಗುವಿಗೆ ಎರಡು ತಿಂಗಳು ತುಂಬಿದ ನಂತರ ಕೊಬ್ರಿ ಎಣ್ಣೆಯನ್ನು ಹಚ್ಚಿ ಬಿಸಿ ನೀರಿನಿಂದ ಸ್ನಾನ ಮಾಡಿಸುತ್ತಾರೆ ಕತ್ತೆ ಮೊಲೆ ಹಾಲಿನ ಗುಟಕಿಯನ್ನು ಮಗುವಿಗೆ ಹಾಕುವ ರೂಢಿ ಇದೆ. ಕತ್ತೆ ಹಾಲು ತಕ್ಷಣ ಸಿಗುವುದಿಲ್ಲವಾದ್ದರಿಂದ ಹೇರಳವಾಗಿ ಲಭ್ಯವಾಗುವ ಸಂದರ್ಭದಲ್ಲಿ ಹಾಲಿನಲ್ಲಿ ಬಿಳಿ ಬಟ್ಟೆ ಅದ್ದಿ ಒಣಗಿಸಿ ಇಟ್ಟಿರುತ್ತಾರೆ. ಮಗುವಿಗೆ ಕುಡಿಸಲು ಬೇಕಾದ ಸಂದರ್ಭದಲ್ಲಿ ಹಾಲಿನಿಂದ ಒಣಗಿಸಿದ ಬಟ್ಟೆಯನ್ನು ನೀರಲ್ಲಿ ಅದ್ದಿ ಹಾಲು ತೆಗೆದು ಮಗುವಿಗೆ ಕುಡಿಸುತ್ತಾರೆ."[೯] ಸೂತಕದ ಅವಧಿ ಮುಗಿಯುವ ಮುಂಚೆ ಬಾಣಂತಿ ಮಹಿಳೆಯರು ಉಪಯೋಗಿಸಿದ ವಸ್ತುಗಳನ್ನು ಭೂಮಿಯಲ್ಲಿ ಹೂಳುವ ಪದ್ಧತಿ ಇರುವುದು ಅಲ್ಲದೇ ಮನೆಯನ್ನು ಶುದ್ಧಗೊಳಿಸುವ ಕ್ರಿಯೆಯಲ್ಲಿ ತೊಡಗುವುದರ ಮೂಲಕ ಮೈಲಿಗೆ ಸೂತಕದ ಛಾಯೆಯು ಮುಗಿದು ಹೋಯಿತು ಎಂದರ್ಥ ಮೂರು ತಿಂಗಳು ಆಗುವವರೆಗೂ ಮಹಿಳೆಯು ಅಡುಗೆ ಮನೆ ಪ್ರವೇಶಿಸುವುದಿಲ್ಲ. ಯಾವುದೇ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತಿಲ್ಲ. ದೇವರು ಇಟ್ಟ ಸ್ಥಳಗಳಲ್ಲಿ ತಿರುಗಾಡುವಂತಿಲ್ಲ. ಧಾರ್ಮಿಕ ಕ್ರಿಯೆಯಲ್ಲಿ ತೊಡಗುವಂತಿಲ್ಲ. ಹೀಗೆ ಅನೇಕ ನಿರ್ಬಂಧನೆಗಳಿಗೆ ಮಹಿಳೆಯು ಒಳಗಾಗಿರುವವಳು. ಮಹಿಳೆಯ ಸಂತಾನೋತ್ಪತ್ತಿಗೆ ಪುರುಷನ ಸಹಭಾಗಿತ್ವವು ಜವಾಬ್ದಾರಿಯನ್ನು ಹೊಂದಿದ್ದರು ಕೂಡಾ ಇಂತಹ ಆಚರಣೆಗಳು ನಂಬಿಕೆಗಳನ್ನು ಮಹಿಳೆಯರಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಪುರುಷನನ್ನು ಸ್ವತಂತ್ರ ವ್ಯಕ್ತಿಯೆಂದು ಪರಿಭಾವಿಸಲಾಗುವುದು.

**ಋತುಮತಿ**

ಹರಿಣಶಿಕಾರಿ ಸಮುದಾಯದಲ್ಲಿ ಧಾರ್ಮಿಕ ಆಚರಣೆಗಳನ್ನು ಬಹಳ ಕಟ್ಟುನಿಟ್ಟಾಗಿ ಪರಿಪಾಲಿಸುವರು. ದೈವದ ಆರಾಧನೆಯಲ್ಲಿ ಬಹಳಷ್ಟು ನಂಬಿಕೆಯನ್ನು ಇಟ್ಟವರು. ಪ್ರತಿಯೊಂದು

ಕಾರ್ಯಗಳು ನಿಯಮಬದ್ಧವಾಗಿ ನಡೆಸಿಕೊಂಡು ಬರುವರು. ಇಂತಹ ನಿಯಮಾವಳಿಗಳ ಪರಿಪಾಲನೆಯಾಗದಿದ್ದರೆ ಮನೆಯ ಕುಲದೇವತೆ ಕೋಪಕ್ಕೆ ಗುರಿಯಾಗಬೇಕಾಗುವುದು. ಅಲ್ಲದೇ ದೇವಿಯ ವಿರುದ್ಧ ನಡೆದುಕೊಂಡರೆ ಅಂತಹ ಕುಟುಂಬಕ್ಕೆ ಅನಾಹುತ ತಪ್ಪಿದ್ದಲ್ಲ ಎಂಬ ಮೂಡನಂಬಿಕೆಗಳು ಅವರಲ್ಲಿ ಸಂಪೂರ್ಣವಾಗಿ ಬೇರೂರಿವೆ.

ಇಂತಹ ಆಚರಣೆ ಸಂಪ್ರದಾಯಗಳು ಪುರುಷರಿಗಿಂತ ಮಹಿಳೆಯರ ಮೇಲೆ ಅಧಿಕವಾಗಿರುವುದನ್ನು ನೋಡಬಹುದು.

ಹರಿಣಶಿಕಾರಿ ಸಮುದಾಯದಲ್ಲಿ ಹೆಣ್ಣು ಮಕ್ಕಳು ಮೈನೆರೆದಾಗ ಅವಳನ್ನು ಮೈಲಿಗೆ ಎಂತಲೇ ಕಾಣುವರು. ಋತುಮತಿಯಾದಾಗ ಅವಳನ್ನು ಮನೆಯ ಹೊರಗೆ ಒಂದು ಗುಡಿಸಲು ಹಾಕಿ ಕೂಡಿಸುವ ಪದ್ಧತಿ ಕಂಡುಬರುವುದು. ಋತುಮತಿಯಾದ ಹೆಣ್ಣಿಗೆ ಮನೆಯ ಒಳಗೆ ಪ್ರವೇಶವಿಲ್ಲ. ಇದನ್ನು ಒಂಬತ್ತು ದಿನಗಳವರೆಗೆ ಪಾಲಿಸಿಕೊಂಡು ಬರುವರು. ಅವಳಿಗೆ ಪ್ರತ್ಯೇಕ ಮಣ್ಣಿನ ತಟ್ಟೆ ಮತ್ತು ಲೋಟವನ್ನು ನೀಡುವರು. ಅವಳು ಮಲಗಲಿಕ್ಕೆ ಬೇಕಾದ ವಸ್ತುಗಳನ್ನು ಕೂಡ ಪ್ರತ್ಯೇಕವಾಗಿ ಮೀಸಲಿಡುವರು. ಅವಳಿಗೆ ನೀಡಬೇಕಾದ ಊಟವನ್ನು ಮನೆಯಲ್ಲಿಯೇ ತಯಾರಿಸಿ ಮುಟ್ಟದಂತೆ ಒದಗಿಸುವರು. ಆ ಗುಡಿಸಲನ್ನು ಬಿಟ್ಟು ಹೊರಗೆ ಬರುವಂತಿಲ್ಲ. ಅಲ್ಲದೇ ಅವಳ ಬಟ್ಟೆಯನ್ನು ಅವಳೇ ಸ್ವಚ್ಛಗೊಳಿಸಿಕೊಳ್ಳಬೇಕು. ಒಂಬತ್ತನೇ ದಿನಕ್ಕೆ ಒಂದು ಕಾರ್ಯವನ್ನು ಮಾಡುವರು. ಅದಕ್ಕೆ "ನಾಹರಿಸಿ ಅಥವಾ ಪಾಲೋಟಿ" ಎಂದು ಕರೆಯುವರು. ಈ ಕಾರ್ಯದ ದಿನ ಅವಳಿಗೆ ಅರಿಶಿಣದ ನೀರಿನ ಸ್ನಾನವನ್ನು ಮಾಡಿಸುವರು. ನಂತರ ಹೊಸ ಸೀರೆ ಕುಬುಸವನ್ನು ಕೊಟ್ಟು ಹೂ, ಬಳೆ, ಹಣ್ಣು-ಹಂಪಲನ್ನು ಉಡಿಯಲ್ಲಿ ತುಂಬುವರು. ಮನೆಯ ಸಂಬಂಧಿಕರಿಗೆಲ್ಲ ಕರೆದು ಕುಬುಸ ನೀಡುವರು. ಅಲ್ಲದೇ ಸಿಹಿ ತಿನಿಸನ್ನು ಮಾಡಿ ಸಂಬಂಧಿಕರಿಗೆ ಹಂಚುವರು. ಅವಳು ಹಲವು ದಿನಗಳಿಂದ ಬಳಸುತ್ತಿದ್ದ ವಸ್ತುಗಳನ್ನು ಒಗೆಯುವರು, ಅಲ್ಲದೇ ಅವಳಿದ್ದ ಗುಡಿಸಲನ್ನು ಅಥವಾ ಮನೆಯ ಭಾಗವನ್ನು ಸಗಣಿಯಿಂದ ಸಾರಿಸಿ ಸ್ವಚ್ಛಗೊಳಿಸುವರು. ಮತ್ತು ಮನೆಯ ಕುಲದೇವರಿಗೆ ಪೂಜೆಯನ್ನು ಸಲ್ಲಿಸುವರು. ಈ ಪೂಜೆಯನ್ನು ಋತುಮತಿಯಾದ ಹೆಣ್ಣುಮಕ್ಕಳು ಮಾಡಬೇಕು. ಈ ಪ್ರತಿಯೊಂದು ಹಂತದಲ್ಲೂ ಮಡಿ-ಮೈಲಿಗೆಯಂತಹ ವಿವರಣೆಯನ್ನು ಹರಿಣಶಿಕಾರಿ ಸಮುದಾಯದಲ್ಲಿ ಕಾಣಬಹುದು.

ಪ್ರತಿಯೊಂದು ಸಮಾಜದಲ್ಲಿ ಹೆಣ್ಣುಮಕ್ಕಳು ಋತುಮತಿಯಾಗುವುದನ್ನು ಒಂದು ಮೈಲಿಗೆ ಎಂತಲೇ ಪರಿಭಾವಿಸಿಕೊಳ್ಳುವ ಅನಿಷ್ಟ ಪದ್ಧತಿಯು ಆಚರಣೆಯಲ್ಲಿರುವುದು. ನೈಸರ್ಗಿಕವಾಗಿ ಹೆಣ್ಣು ಮಕ್ಕಳ ಜೈವಿಕತೆಗೆ ಸಂಬಂಧಿಸಿದಂತೆ ಇದು ಸಮಂಜಸವಾಗಿದ್ದು, ಅದನ್ನು ಈ ಸಮಾಜದಲ್ಲಿ ಕಟ್ಟಿಕೊಟ್ಟ ನೆಲೆಯೇ ವಿಭಿನ್ನವಾಗಿರುವುದು. "ಬಾಲೆಯಾಗಿದ್ದವಳು ಮೈನೆರೆದಾಕ್ಷಣ ಹೆಂಗಸನ್ನಾಗಿ ಪರಿಭಾವಿಸಿ ಸಮಾಜ ಮತ್ತು ಕುಟುಂಬಗಳು ಅವಳನ್ನು ವಯಸ್ಕಳಂತೇನೇ ಮದುವೆ ಹಾಗೂ

ತಾಯ್ತನಗಳ ಹೊಣೆ ಹೋರಲು ಸಿದ್ಧವಾಗಬೇಕೆಂದು ಕಾಲವದು."[೧೦] ಈ ರೀತಿಯ ಮನಸ್ಥಿತಿಯನ್ನು ಹರಿಣಶಿಕಾರಿ ಸಮುದಾಯದಲ್ಲಿ ನೋಡಬಹುದು. ಈ ಸಮುದಾಯದಲ್ಲಿ ಹೆಣ್ಣು ಮೈನೆರೆದಿದ್ದಾಳೆ ಎಂಬ ಸುದ್ದಿಯ ಹಿನ್ನೆಲೆಯಲ್ಲಿಯೇ ಅವಳಿಗೆ ಮದುವೆ ಸಂಬಂಧಗಳು ಬರುವುದು. ಕೆಲವೊಂದು ಸಲ ಮೈನೆರದ ಸಂದರ್ಭದಲ್ಲಿ ಬಂದ ಬಂಧು ಮಿತ್ರರು ಅವಳ ಮದುವೆ ಸಂಬಂಧವನ್ನು ಮುಂದಿಟ್ಟು ತಾಯಿ ತಂದೆಯ ಒಪ್ಪಿಗೆಯನ್ನು ಪಡೆದು ಮದುವೆಗೆ ಸಿದ್ಧರಾಗುತ್ತಾರೆ. ಹಾಗಾಗಿ ಈ ಸಮುದಾಯದಲ್ಲಿ ಬಾಲ್ಯವಿವಾಹದಂತಹ ಪದ್ಧತಿ ಹೆಚ್ಚಾಗಿ ಕಂಡುಬರುವುದು ಅಲ್ಲದೇ ದೈವ ಶಾಸ್ತ್ರಗಳು ಹೆಣ್ಣು ಮಕ್ಕಳ ಋತುಮತಿಯ ಸ್ಥಿತಿಯನ್ನು ವಿಭಿನ್ನವಾಗಿ ನೆಲೆಗೊಳಿಸುವುದರ ಮೂಲಕ ಮಹಿಳೆಯರ ಮಡಿ-ಮೈಲಿಗೆಯಲ್ಲದೆ ಇನ್ನೂ ಅನೇಕ ರೀತಿಯ ಕಷ್ಟಗಳಿಗೆ ಒಳಗಾಗುವಳು. ಧರ್ಮ ಸ್ಮೃತಿಕಾರರಲ್ಲಿ ಒಬ್ಬರಾದ ಯಜ್ಞವಲ್ಯ ಮುನಿಯ ಪ್ರಕಾರ "ಹೆಣ್ಣು ಮಕ್ಕಳು ಪ್ರಾಪ್ತ ವಯಸ್ಸಿಗೆ ಬರುವ ಮುನ್ನವೇ ಅವರಿಗೆ ವಿವಾಹ ಮಾಡಬೇಕು. ಇಲ್ಲದಿದ್ದರೆ ಆಕೆ ಪ್ರತಿ ಬಾರಿ ಋತುಮತಿಯಾದಾಗ ಒಂದು ಭ್ರೂಣವನ್ನು ಕೊಂದ ಪಾಪ ಆಕೆಯ ಪೋಷಕರಿಗೆ ತಟ್ಟುತ್ತದೆ."[೧೧] ಹೀಗೆ ಧರ್ಮಶಾಸ್ತ್ರಗಳಲ್ಲಿ ಈ ರೀತಿಯ ಪ್ರಸ್ತಾಪವನ್ನು ರೂಪಿಸುವುದರ ಮೂಲಕ ಹೆಣ್ಣುಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡಿಕೊಳ್ಳುವ ಧೋರಣೆಯನ್ನು ಗಟ್ಟಿಗೊಳಿಸುವದರಲ್ಲಿ ಋತುಮತಿಯಾದ ಹೆಣ್ಣನ್ನು ಆಟದ ಗೊಂಬೆಯಂತೆ ಸಾಮಾಜಿಕ ಸಂದರ್ಭದಲ್ಲಿ ಬಳಕೆ ಮಾಡಿಕೊಂಡಿರುವುದನ್ನು ನೋಡಬಹುದು. ಪಾತಿವ್ರತ್ಯದ ಕಲ್ಪನೆ ಇದಕ್ಕೆ ಇನ್ನೊಂದು ಕಾರಣವಾಗಿರಬಹುದು. ಮಹಿಳೆಯ ಲೈಂಗಿಕತೆಯ ಸ್ವಾತಂತ್ರವನ್ನು ಅದುಮಿಡುವ ಒಂದು ಪುರುಷ ರಾಜಕೀಯದ ಹುನ್ನಾರವೆಂತಲೋ ಹೇಳಬಹುದು. ಹೀಗೆ ಧಾರ್ಮಿಕ ನಿಯಮಗಳು ಮಹಿಳೆಗೆ ಧರ್ಮದ ಹೆಸರಿನಲ್ಲಿ ಹಿಡಿತದಲ್ಲಿರಿಸಿಕೊಂಡರು. ಪುರುಷ ಪ್ರಧಾನ ಲಕ್ಷಣವನ್ನು ಕಾಣಬಹುದು.

## ಸಾವು

ಹರಿಣಶಿಕಾರಿ ಸಮುದಾಯದಲ್ಲಿ ಸತ್ತ ವ್ಯಕ್ತಿಯನ್ನು ಎರಡು ವಿಧಾನಗಳಿಂದ ಅಂತ್ಯಕ್ರಿಯೆಗಳನ್ನು ಮಾಡುವರು. ಒಂದು ಸುಡುವುದು, ಇನ್ನೊಂದು ಮಣ್ಣಿನಲ್ಲಿ ಹೂಳುವುದು. ಸತ್ತ ವ್ಯಕ್ತಿ ಮದುವೆಯಾಗದಿದ್ದರೆ ಅಥವಾ ಪೂಜಾರಿಯಾಗಿದ್ದರೆ ಮಣ್ಣಿನಲ್ಲಿ ಹೂಳುವ ಪದ್ಧತಿ ಇರುವುದು. ಇನ್ನುಳಿದವರು ಹನ್ನೊಂದು ವರ್ಷಕ್ಕಿಂತ ಮೇಲ್ಪಟ್ಟಿರುವವರನ್ನು ಸುಡುವ ಪದ್ಧತಿ ಇರುವುದು ವ್ಯಕ್ತಿ ಮರಣ ಹೊಂದಿದ ದಿನ ಅಥವಾ ಮರುದಿನ ಬೇವಿನ ಕಟ್ಟಿಗೆಯಿಂದ ಚಟ್ಟವನ್ನು ಕಟ್ಟಿ ಶವವನ್ನು ಸ್ಮಶಾನಕ್ಕೆ ಒಯ್ದು ಅಲ್ಲಿ ತುಪ್ಪದಿಂದ ಶವದ ಮೈಗೆ ಉಜ್ಜುತ್ತಾರೆ. ನಂತರ ನೀರಿನಿಂದ ಸ್ನಾನ ಮಾಡಿಸಿ ಅಂತ್ಯಕ್ರಿಯೆ ಕಾರ್ಯ ಮುಗಿಸುವರು. ನಂತರ ಪೂಜಾರಿ ಆ ವ್ಯಕ್ತಿಯ ಬಗ್ಗೆ ಒಂದೆರಡು ಮಾತುಗಳನ್ನು ಹೇಳಿಕೆ ರೂಪದಲ್ಲಿ ಹೇಳುವನು ಅಲ್ಲಿಂದ ಎಲ್ಲ ಜನರು ಸತ್ತ ವ್ಯಕ್ತಿಯ ಮನೆಗೆ ಹೋಗಿ ಸರಾಯಿಯನ್ನು ತೀರ್ಥದ ರೂಪದಲ್ಲಿ ಕುಡಿಯುವರು. ಮರುದಿನ ಸತ್ತ ವ್ಯಕ್ತಿಯ ಅಂತ್ಯಕ್ರಿಯೆಯ ಸ್ಥಳದಲ್ಲಿ ಸತ್ತ ವ್ಯಕ್ತಿಗೆ ಇಷ್ಟವಾದ ಖಾದ್ಯವನ್ನು ಮಾಡಿ ಕುಳಿತುಕೊಂಡಿರುತ್ತಾರೆ.

ಅದನ್ನು ಯಾವುದೇ ಪ್ರಾಣಿ ಪಕ್ಷಿಗಳು ಮುಟ್ಟುವವರೆಗೂ ಕಾಯುತ್ತಾರೆ. ಇದರರ್ಥ ಆ ಆಹಾರವನ್ನು ಪ್ರಾಣಿ ತಿಂದರೆ ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿ ದೊರೆತ ಹಾಗೆ. ಮರುದಿನ ಸತ್ತ ವ್ಯಕ್ತಿಯ ಹೆಗಲು ಇಳಿಸುವ ಕಾರ್ಯವನ್ನು ಮಾಡುವರು.

## ವೈಧವ್ಯ

ಹರಿಣಶಿಕಾರಿ ಸಮುದಾಯದಲ್ಲಿ ವೈಧವ್ಯದ ಆಚರಣೆಗಳು ಕಂಡುಬರುವುದು ಮಹಿಳೆಯರು ಈ ಆಚರಣೆಗಳಿಗೆ ಒಳಗಾಗಿದ್ದು, ಅನೇಕ ಕಟ್ಟುಪಾಡುಗಳನ್ನು ಅನುಸರಿಸುತ್ತಿರುವುದು, ಕಂಡುಬರುವುದು. ಗಂಡನ ಮರಣದ ನಂತರ ಹೆಂಡತಿ ಮುತ್ತೈದೆಯ ಸಂಕೇತವೆನಿಸಿಕೊಂಡ ಹೂ, ಬಳೆ, ಕುಂಕುಮವನ್ನು ಇಟ್ಟುಕೊಳ್ಳಲು ಬಿಡುವುದಿಲ್ಲ. ವಿಧವೆಯಾದ ಮಹಿಳೆ ಸಮುದಾಯದ ಯಾವುದೇ ಕಾರ್ಯಕ್ರಮಗಳಲ್ಲಿ ಬಿಡುವುದಿಲ್ಲ. ಹೆಣ್ಣು ಮತ್ತು ಗಂಡಿನ ನಡುವಿನ ತಾರತಮ್ಯದ ಧೋರಣೆಯು ಕೂಡಾ ವೈಧವ್ಯದ ಆಚರಣೆಗೆ ಮಹಿಳೆಯರು ಒಳಗಾಗುತ್ತಿರುವುದು ಒಂದು ಕಾರಣವಾಗಿದೆ. "ಹೆಣ್ಣು ಮದುವೆಗೆ ಮುಂಚೆ ಶುದ್ಧ ಕನ್ನಿಕೆಯಾಗಿರಬೇಕು. ಮದುವೆಯಾಯಿತೋ ಅದೆಂಥದೇ ಸಂದರ್ಭದಲ್ಲೂ ಪತಿಯನ್ನು ಬಿಡುವಂತಿಲ್ಲ. ಇನ್ನು ವಿಧವೆಯಾಗಿಬಿಟ್ಟರೋ ಅವಳಿಗೆ ಅವನಿಂದ ಬಿಡುಗಡೆ ಇಲ್ಲ. ಅವನ ಹಿಂದೆಯೇ ಅವಳು ತನ್ನ ಸುಖ ಸರ್ವಸ್ವವನ್ನು ತ್ಯಜಿಸಿ ಬಳೆ, ಕುಂಕುಮ, ಮಾಂಗಲ್ಯ ಬಣ್ಣದ ಸೀರೆಗಳಂತಹ ದಿನನಿತ್ಯದ ಸಂತೋಷದ ಅಲಂಕಾರವನ್ನು ತೆಗೆದುಹಾಕಿಬಿಡಬೇಕು."[೧೨] ಇಂಥಾ ಆಚರಣೆಗಳಿಗೆ ಕೇವಲ ಮಹಿಳೆಯರು ಮಾರ ಸೀಮಿತವಾಗಿ ಇರುತ್ತಾರೆ. ಪುರುಷ ವಿಧುರನಾದರೆ ಅವನಿಗೆ ಯಾವುದೇ ಧಾರ್ಮಿಕ ಕಟ್ಟುಪಾಡುಗಳನ್ನು ಹೇರುವುದಿಲ್ಲ. ಅವನು ಮತ್ತೆ ಮರುಮದುವೆಯಾಗಬಹುದು. ಅವನನ್ನು ಯಾರೂ ಪ್ರಶ್ನಿಸುವುದಿಲ್ಲ. ಆದರೆ ಮಹಿಳೆಯು ಮರುಮದುವೆಯ ಬಗ್ಗೆ ಆಲೋಚಿಸಿದರೆ ಸಾಕು ಅದೊಂದು ಪಾಪ ಎನ್ನುವಂತಹ ದೃಷ್ಟಿಕೋನ ಸಮಾಜದ ಆಳದಲ್ಲಿ ಬೇರೂರಿದೆ. ಇಂತಹ ಆಚರಣೆಗಳು ಎಲ್ಲಾ ಸಮುದಾಯಗಳಲ್ಲಿ ಕಂಡುಬರುವುದು. ಆದರೆ ಹರಿಣಶಿಕಾರಿ ಸಮುದಾಯದಲ್ಲಿ ಮಹಿಳೆಯ ಗಂಡ ತೀರಿ ಹೋದ ನಂತರ ಮತ್ತೊಂದು ಮದುವೆ ಅವಕಾಶ ನೀಡಿದ್ದರೂ ಕೂಡ ಅನೇಕ ದ್ವಂದ್ವತೆಗೆ ಒಳಗಾಗುವಳು.

## ಹಬ್ಬ ಹರಿದಿನಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ

ಹರಿಣಶಿಕಾರಿ ಸಮುದಾಯದಲ್ಲಿ ಜಾತ್ರೆಗಳು ವ್ರತಾಚರಣೆಗಳು ಹಬ್ಬದ ಆಚರಣೆ ಕಂಡುಬರುವುದು. ಇವರಲ್ಲಿ ಕಂಡುಬರುವ ಮುಖ್ಯವಾದ ಜಾತ್ರೆ ಎಂದರೆ ದಂಡಿಯ ದುರ್ಗಮ್ಮನ ಜಾತ್ರೆ, ಕಳಕಮ್ಮನ ಜಾತ್ರೆ, ಯಮನೂರ ಜಾತ್ರೆ, ಲಕ್ಷ್ಮಿ ಜಾತ್ರೆ ಮುಂತಾದವುಗಳು. ಹರಿಣಶಿಕಾರಿಯರು ಪೂಜಿಸುವ ಆರು ದೇವತೆಯನ್ನು ಬಿಟ್ಟು ಇನ್ನೂ ಬೇರೆ ಬೇರೆ ದೇವತೆಗಳಾದ ಶಿವ, ಪಾರ್ವತಿ, ಹನುಮಾನ, ಲಕ್ಷ್ಮಿ, ನರಸಿಂಹ ಮುಂತಾದವರನ್ನು ಪೂಜಿಸುತ್ತಾರೆ. ಮಹಿಳೆಯರು ಮುಖ್ಯವಾಗಿ ತೊಡಗುವ ವ್ರತಾಚರಣೆಗಳೆಂದರೆ: ಸಂತೋಷಿ ಮಾತಾ, ಕಾಳಿ ಮಾತಾ, ರಮಣಾದೇವಿ ವ್ರತ

ಮುಂತಾದವುಗಳು. ಈ ವ್ರತಾಚರಣೆಗಳು ಮುಖ್ಯವಾಗಿ ಮಹಿಳೆಯರು ತುಂಬಾ ಕುಟುಂಬದ ಹಿತಾಸಕ್ತಿಗಾಗಿ ಕೈಗೊಂಡಿದ್ದವಾಗಿವೆ. ಇಂಥಾ ವ್ರತಾಚರಣೆಗಳಲ್ಲಿ ಮಹಿಳೆಯರು ಮಡಿಯಿಂದ ದೇವರ ಪೂಜೆಯನ್ನು ಮಾಡುವರು ದೇವರ ನೈವೇಧ್ಯವನ್ನು ತಯಾರಿಸುವ ಕ್ರಿಯೆಯಲ್ಲಿ ತೊಡಗುವರು. ಮಹಿಳೆಯರ ಈ ಆಚರಣೆಗಳು ಹೆಚ್ಚಾಗಿ ಮಕ್ಕಳ ಮತ್ತು ಮುತ್ತೈದೆತನದ ಭಾಗ್ಯಕ್ಕೋಸ್ಕರ ಮೀಸಲಿಡುತ್ತಾರೆ. ಹರಿಣಶಿಕಾರಿ ಸಮುದಾಯದಲ್ಲಿ ಧಾರ್ಮಿಕ ಹಬ್ಬಗಳಿಗೆ ಹೆಚ್ಚಿನ ಬೆಲೆಯಿದ್ದು, ಅವುಗಳ ಆಚರಣೆ ಪರಿಪಾಲಿಸುವುದು ಮುಖ್ಯವಾಗಿರುವುದು. ಮತ್ತು ತುಂಬಾ ಕಟ್ಟುನಿಟ್ಟಾಗಿ ಧಾರ್ಮಿಕ ನಿಯಮಗಳನ್ನು ಅನುಸರಿಸಿಕೊಂಡು ಹೋಗುವರು. ಇಂತಹ ಪರಿಸ್ಥಿತಿಯಲ್ಲಿ ಮಹಿಳೆಯರ ಸಂದರ್ಭಕ್ಕೆ ಮಡಿ–ಮೈಲಿಗೆ, ಸೂತಕದಂತಹ ಆಚರಣೆಗಳು ಮಹಿಳೆಯರ ಮೇಲೆ ಹೇರಿರುವುದು ಕಂಡುಬರುವುದು. "ಬಹುತೇಕ ಎಲ್ಲಾ ಹಿಂದೂ ವ್ರತಾಚಾರಣೆಗಳು ಲೌಕಿಕವಾದ ಆಸೆ ಆಕಾಂಕ್ಷೆಗಳನ್ನು ನೆರವೇರಿಸಿಕೊಳ್ಳುವ ಉದ್ದೇಶವನ್ನೇ ಹೊಂದಿವೆ. ಈ ಸಂದರ್ಭಗಳು ಮಹಿಳೆಯರು ಸ್ನೇಹ ವಲಯಗಳಲ್ಲಿ ಸಾಮಾಜಿಕವಾಗಿ ಬೆರೆಯುವ ಅವಕಾಶಗಳನ್ನು ಕಲ್ಪಿಸುತ್ತವೆ. ವ್ರತಾಚರಣೆಯನ್ನು ನಡೆಸಿಕೊಂಡು ಹೋಗುವ ಹೊಣೆಯನ್ನು ಗಂಡಸು ಸಂಪೂರ್ಣವಾಗಿ ಹೆಂಗಸರಿಗೆ ವಹಿಸಿಬಿಟ್ಟಾಗ ಅವಳಿಗೆ ಆದ ಅನುಕೂಲವೆಂದರೆ ಸ್ವಲ್ಪಮಟ್ಟಿಗೆ ಮನೆಯ ಕೇಂದ್ರದಲ್ಲಿ ಗಂಡಸಿಗಿಂತ ಹೆಚ್ಚಿನ ಅಧಿಕಾರ ಮನ್ನಣೆ, ದೊರಕುವಂತಾದದ್ದು. ಇಲ್ಲಿ ಗಂಡ ಅವಳನ್ನು ಅರ್ಧಾಂಗಿ ಎಂದು ಕರೆದು ಗೌರವಿಸಿದ್ದಾನೆ. ಹೆಂಗಸು ಮಾಡುವ ಈ ಎಲ್ಲಾ ವ್ರತಾಚರಣೆಗಳ ಉದ್ದೇಶ ಮನೆ, ಮಕ್ಕಳು, ಗಂಡ ಇವರ ಶ್ರೇಯೋಭಿವೃದ್ಧಿಗಾಗಿ ಮಾತ್ರ. ಅವಳದ್ದೆಂದು ಯಾವ ಪ್ರತ್ಯೇಕ ಆಕಾಂಕ್ಷೆಯೂ ಇಲ್ಲಿ ವ್ಯಕ್ತವಾಗುವುದಿಲ್ಲ."[೧೩] ಇಂಥಾ ಮನೋಧೋರಣೆ ಸಮುದಾಯದ ಎಲ್ಲಾ ಮಹಿಳೆಯರಲ್ಲಿ ಕಂಡುಬರುವುದು. ಧಾರ್ಮಿಕ ನಂಬಿಕೆಗಳು ಪಾತ್ರ ಮಾದರಿಗಳು ಮಹಿಳೆಯರ ಮನಸ್ಥಿತಿಯು ಪುರುಷ ಅಧಿಕಾರತ್ವವನ್ನು ಒಪ್ಪಿಕೊಂಡಿರುವುದು.

## ಜಾತ್ರೆ

ಹರಿಣಶಿಕಾರಿ ಸಮುದಾಯದವರು ಒಂದೆಡೆ ಸೇರಿಕೊಂಡು ಜಾತ್ರೆಯ ಆಚರಣೆಯಲ್ಲಿ ತೊಡಗುವರು. ಒಂದು ವರ್ಷಕ್ಕೊಮ್ಮೆ ಯುಗಾದಿ ಹಬ್ಬದ ಸಂದರ್ಭದಲ್ಲಿ ಕಳಕಮ್ಮ ಜಾತ್ರೆ ಮಾಡುವರು. ಹೋಳಿ ಹುಣ್ಣಿಮೆ ದಿನ ಯಮನೂರ ಜಾತ್ರೆ, ದಸರಾ ಹಬ್ಬದ ಸಂದರ್ಭದಲ್ಲಿ ಲಕ್ಷ್ಮೀ ಜಾತ್ರೆಯನ್ನು ಮಾಡುವರು. ಈ ಎಲ್ಲಾ ಜಾತ್ರೆಗಳಿಗಿಂತ ಮುಖ್ಯವಾದುದು ಮತ್ತು ವಿಶೇಷತೆಯನ್ನು ಹೊಂದಿದ ಜಾತ್ರೆಯೆಂದರೆ ದಂಡಿನ ದುರುಗಮ್ಮನ ಜಾತ್ರೆ. ಈ ಜಾತ್ರೆಗೆ ಕರ್ನಾಟಕದಾದ್ಯಂತ ಎಲ್ಲಾ ಕಡೆ ಇರುವ ಹರಿಣಶಿಕಾರಿ ಸಮುದಾಯದವರು ಒಂದೆಡೆ ಸೇರುವರು. ಈ ಜಾತ್ರೆ ತುಂಬಾ ವಿಶೇಷತೆಯಿಂದ ಕೂಡಿರುವುದು. ಈ ಜಾತ್ರೆ ದವನದ ಹುಣ್ಣಿಮೆಯಾದ ನಂತರ ಮಾಡುವರು. ಹರಿಣಶಿಕಾರಿ ಸಮುದಾಯದವರಿಗೆ ಇದೊಂದು ಪವಿತ್ರ ಯಾತ್ರಾ ಸ್ಥಳವಾಗಿದೆ.

ದಂಡಿನ ದುರುಗಮ್ಮನ ಐತಿಹ್ಯದ ಬಗ್ಗೆ ಮುನ್ನಿ ಸಾಮಡಿಯವರು ಹೇಳಿದ ಕಥೆಯನ್ನು ಲಕ್ಕಿ ಪೃಥ್ವಿರಾಜ್, ಎಚ್.ಪಿ. ಶಿಕಾರಿ ರಾಮು ಬರೆದ ಪಾರ್ದಿ ಎಂಬ ಪುಸ್ತಕದಲ್ಲಿ ದಾಖಲಿಸಿದ ಪ್ರಕಾರ –

ಗದುಗಿನ ಬೆಟಗೇರಿ ಸುತ್ತಮುತ್ತ ವಾಸವಾಗಿದ್ದ ಪಾರ್ದಿ ಬುಡಕಟ್ಟಿನವರು ನಾಗಸಮುದ್ರದ ಸುತ್ತಮುತ್ತ ಚಿಗರೆ ಬೇಟೆಗಾಗಿ ಅವಲಿ, ಮನ್ ಫೂ, ಗೋವಿಂದ ಮತ್ತಿತರರು ಕಾಡಿಗೆ ಹೋಗಿರುತ್ತಾರೆ. ಆಗ ದಂಡಿನ ದುರುಗಮ್ಮ ದೇವಿ ಅಜ್ಜಿಯ ವೇಷದಲ್ಲಿ ಬಂದು ಅವಲಿಗೆ ಬೇಟಿಯಾಗುತ್ತಾಳೆ. ಅವನಿಗೆ ದುಗ್ಗಾಣಿಯನ್ನು ಕೊಟ್ಟು ತನ್ನ ಸೇವೆಯನ್ನು ಮಾಡಳು ಹೇಳುತ್ತಾಳೆ. ಆದರೆ ಅವಲಿ ಅದಕ್ಕೆ ಒಪ್ಪುವುದಿಲ್ಲ. ನೀನು ಕೀರ್ತನೆ ತುಂಬಾ ದೊಡ್ಡದು ನಿನ್ನ ಸೇವೆ ನನಗೆ ಮಾಡಲಿಕ್ಕೆ ಆಗುವುದಿಲ್ಲ. ನಿನ್ನ ಪೂಜೆಗೆ ನಂಬಲರ್ಹ ವ್ಯಕ್ತಿಯನ್ನು ಹುಡುಕು ಎಂದು ಹೇಳುತ್ತಾನೆ. ಆಗ ದುರ್ಗಾ ದೇವಿ ಮಾಯವಾಗುತ್ತಾಳೆ. ಮರುದಿನ ಗೋವಿಂದ ಮನಪೋ ಇಬ್ಬರೂ ಅದೇ ಜಾಗಕ್ಕೆ ಹೋದರು. ಒಂದು ಬೇಟೆಯು ಸಿಗುವುದಿಲ್ಲ. ಮನೆಗೆ ಹಿಂತಿರುಗುತ್ತಾರೆ. ನಂತರ ಗೋವಿಂದ ಒಬ್ಬನೇ ಚಿಗರೆ ಬೇಟೆಗೆ ಹೋದಾಗ ಬಲೆಗೆ ಯಾವ ಚಿಗರೆನೂ ಬೀಳುತ್ತಿರಲಿಲ್ಲ ಅವು ಪವಾಡ ಸದೃಶ್ಯ ಮರೆಯಾಗುತ್ತಿದ್ದವು. ಗೋವಿಂದನಿಗೆ ಮುಂದೆ ದಂಡಿನ ದುರ್ಗಮ್ಮನ ದರುಶನವಾಗುವುದು. ದುರ್ಗಾ ಮಾತೆ ದುಗ್ಗಾಣಿ ಕೊಟ್ಟು ಪೂಜೆಗೆ ಒಪ್ಪಿಸಲು ಪ್ರಯತ್ನಿಸುತ್ತಾಳೆ. ಆದರೆ ಗೋವಿಂದ ಅದನ್ನು ಒಪ್ಪುವುದಿಲ್ಲ. ಆಗ ದೇವಿ ಕೋಪಿತಳಾಗಿ ಗೋವಿಂದನನ್ನು ಮಾಯವಾಗಿಸುತ್ತಾಳೆ. ಮೂರು ನಾಲ್ಕು ದಿನ ಕಳೆದ ನಂತರ ಗೋವಿಂದನ ಹೆಂಡತಿ ಗಂಡನನ್ನು ಹುಡುಕಿಕೊಂಡು ಬರುತ್ತಾಳೆ. ಆಗಲೂ ದೇವಿಯ ದರುಶನವಾಗುವುದು. ದೇವಿ ನಡೆದ ಎಲ್ಲಾ ಘಟನೆಯನ್ನು ಹೇಳುತ್ತಾಳೆ. ಇದಕ್ಕೆಲ್ಲಾ ಒಪ್ಪಿದರೆ ಅವಳ ಗಂಡನನ್ನು ಹಿಂತಿರುಗಿಸುವುದಾಗಿ ಹೇಳುತ್ತಾಳೆ. ದೇವಿಗೆ ಒಪ್ಪಿಗೆ ನೀಡಿದ ನಂತರ ಗೋವಿಂದ ಮರಳಿ ಬರುತ್ತಾನೆ. ಮುಂದೆ ಈತ ಪವಾಡ ಮಾನವನಾಗಿ ಪ್ರಸಿದ್ಧಿ ಹೊಂದುತ್ತಾನೆ. ಹಾಗೆಯೇ ದಂಡಿನ ದುರ್ಗಮ್ಮಳ ಕೀರ್ತಿಯು ಹೆಚ್ಚುತ್ತಾ ಹೋಯಿತು. ಇಂದಿಗೂ ಕೂಡ ದುರ್ಗಮ್ಮ ಜಾತ್ರೆಯನ್ನು ತುಂಬಾ ವಿಜೃಂಭಣೆಯಿಂದ ಮಾಡುತ್ತಾರೆ. ಈ ಜಾತ್ರೆಯ ಸಂದರ್ಭದಲ್ಲಿ ದೇವಿಗೆ ನೈವೇಧ್ಯ ರೂಪದಲ್ಲಿ ಸಜ್ಜಕವನ್ನು ಮಾಡುತ್ತಾರೆ. ಭಾವಾವೇಶಕ್ಕೆ ಒಳಗಾದ ವ್ಯಕ್ತಿಯು ಬಿಸಿ ಕುದಿಯುತ್ತಿರುವ ಸಜ್ಜಕದಲ್ಲಿ ತಮ್ಮ ಕೈಯನ್ನು ಹಾಕಿ ತೆಗೆಯುವರು. ಇದೇ ರೀತಿಯಲ್ಲಿ ತಮ್ಮ ತಮ್ಮ ಪಾವಿತ್ರ್ಯತನವನ್ನು ಪರೀಕ್ಷಿಸಲು ದುರ್ಗಮ್ಮನ ಮುಂದೆ ಬಿಸಿ ಎಣ್ಣೆಯಲ್ಲಿ ಕೈಯನ್ನು ಹಾಕುವರು. ಹೆಚ್ಚಿನ ಸಂಖ್ಯೆಯ ಮಹಿಳೆಯರು ಈ ಪರೀಕ್ಷೆಗೆ ಒಳಗಾಗುತ್ತಾರೆ. ಒಂದು ಈ ಬಿಸಿ ಎಣ್ಣೆಯಲ್ಲಿ ಕೈ ಸುಟ್ಟರೆ ಅವಳು ಹಾದರ ಮಾಡಿದ್ದಾಳೆ ಎಂದು ತಿಳಿಯಲಾಗುವುದು. ಹೀಗೆ ಸಹಜ ಮತ್ತು ಪಾವಿತ್ರ್ಯದ ಅಚ್ಚಿನೊಳಗೆ ಹೆಣ್ಣನ್ನು ಎರಕ ಒಯ್ಯಲಾಗಿದೆ."[೧೪] ಈ ಬಿಕ್ಕಟ್ಟು ಮಹಿಳೆಯ ಗುಣಗಳನ್ನು ಪ್ರಕೃತಿಯ ಸಹಜ ಕ್ರಿಯೆಯೆಂತೆಲ್ಲ ಪರಿಭಾವಿಸಿಕೊಳ್ಳುತ್ತಾರೆ. ಹರಿಣಶಿಕಾರಿ ಸಮುದಾಯದಲ್ಲಿ ಮಹಿಳೆಯರ ಪಾವಿತ್ರ್ಯದ ಬಗೆಗೆ ಅನೇಕ ಮಿಥ್ಯಗಳನ್ನು ಕಟ್ಟುವುದರ ಮೂಲಕ ಅವರ ಲೈಂಗಿಕ ಹಿತಾಸಕ್ತಿಯನ್ನು ಒಂದು ನಿರ್ಬಂಧಕ್ಕೆ ಒಳಪಡಿಸಲಾಗುವುದು. ಹೀಗೆ ಪುರುಷ ಮೌಲ್ಯಾಧಾರಿತ ಪ್ರಯತ್ನಗಳು ಧರ್ಮಗಳ ಮೂಲಕ ಮುನ್ನುಗ್ಗುತ್ತಿರುವುದು ಕಂಡುಬರುವುದು.

## ಹಬ್ಬಗಳು

ಹರಿಣಶಿಕಾರಿ ಸಮುದಾಯದಲ್ಲಿ ದಸರಾ, ಯುಗಾದಿ, ಹೋಳಿಹುಣ್ಣಿಮೆ ಮುಂತಾದ ಹಬ್ಬಗಳ ಆಚರಣೆ ಮಾಡುವರು. ಆದರೆ ದೀಪಾವಳಿ ಹಬ್ಬವನ್ನು ವಿಶೇಷವಾಗಿ ಮಹಿಳೆಯರು ಮಾಡುವರು. ದೀಪಾವಳಿ ಹಬ್ಬವನ್ನು ಹೊರತಾಗಿಸಿ ಎಲ್ಲಾ ಹಬ್ಬಗಳಲ್ಲಿ ಪುರುಷರ ಮೇಲುಗೈ ಹೊಂದಿರುತ್ತಾರೆ. ಅಲ್ಲಿ ಮಹಿಳೆಯ ಭಾಗವಹಿಸುವಿಕೆ ಇಲ್ಲ. ದೀಪಾವಳಿ ಹಬ್ಬದ ಸಂದರ್ಭದಲ್ಲಿ ಮಹಿಳೆಯು ಒಂದು ತಟ್ಟೆ ಮತ್ತು ಚಮಚೆಯನ್ನು ಇಟ್ಟುಕೊಂಡು ಅದನ್ನು ಭಾರಿಸುತ್ತಾ ಮನೆಯನ್ನು ಐದು ಸುತ್ತು ಹಾಕುವರು. ಇದನ್ನು "ಟಿಟೋರಾ" ಎಂದು ಕರೆಯುವರು. ಹೀಗೆ ಮನೆ ಸುತ್ತು ಹಾಕುವಾಗ ಮನೆಯ ಎಲ್ಲಾ ಸದಸ್ಯರು ಆಕೆಯ ಹಿಂದೆ ಇರುವರು. ಮನೆಯ ಹಿಂಭಾಗಿಲಿಗೆ ಲಕ್ಷ್ಮಿಯ ಮೂರ್ತಿಯನ್ನು ಇಟ್ಟು ತಟ್ಟೆಗೆ ಚಮಚೆಯನ್ನು ಓರೆ ಮಾಡಿ ಇಟ್ಟು ಅದಕ್ಕೆ ಪೂಜೆಯನ್ನು ಮಾಡುವರು. ಇದನ್ನು ಲಕ್ಷ್ಮಿಯ ಪ್ರತಿಷ್ಠಾಪನೆಯ ಸಂಕೇತವಾಗಿ ಕಾಣುವರು. ಈ ಒಂದು ಆಚರಣೆಯಲ್ಲಿ ಮಾತ್ರ ಮಹಿಳೆಯರು ಕಂಡುಬರುತ್ತಾರೆ. ಪ್ರಧಾನವಾದ ಯಾವುದೇ ಕೆಲಸದಲ್ಲಿ ಪುರುಷರೇ ಕಾಣಿಸಿಕೊಳ್ಳುತ್ತಾರೆ. ಧಾರ್ಮಿಕ ಆಚರಣೆಯ ಎಲ್ಲಾ ಸಂದರ್ಭದಲ್ಲಿ ಪ್ರತಿಯೊಂದು ಹಂತದಲ್ಲೂ ಪೂಜೆಗೆ ಬೇಕಾಗುವ ಎಲ್ಲ ವಸ್ತುಗಳನ್ನು ಅಣಿಮಾಡಿಕೊಂಡಿರುತ್ತಾಳೆ. ಆದರೆ ನೇರವಾಗಿ ಕೆಲವೊಂದು ಆಚರಣೆಗಳಲ್ಲಿ ಮಹಿಳೆಯರು ಭಾಗವಹಿಸಲು ಬಿಡುವುದಿಲ್ಲ. ಧರ್ಮ ಅದನ್ನು ಬಹಿಷ್ಕರಿಸುತ್ತದೆ.

ಹರಿಣಶಿಕಾರಿ ಸಮುದಾಯದಲ್ಲಿಯ ಧಾರ್ಮಿಕ ಕಟ್ಟುಪಾಡುಗಳು, ನಂಬಿಕೆಗಳು, ಆಚರಣೆಗಳನ್ನು ವೀಕ್ಷಿಸಿದಾಗ ಅವು ತುಂಬಾ ನಿಯಮ ಬದ್ಧವಾಗಿರುವವು ಸಮುದಾಯದ ಬೆಡಗಿನವರು ಮುಖ್ಯವಾಗಿ ಹೆಣ್ಣು ಆರಾಧಿಸುವವರಾಗಿದ್ದರೂ ಕೂಡ ಹೆಣ್ಣನ್ನು ದೇವರ ಕಾರ್ಯದಲ್ಲಿ ಭಾಗವಹಿಸಲು ಸಮ್ಮತಿಸದೇ ಧಾರ್ಮಿಕ ನಿರ್ಬಂಧವನ್ನು ಹೇರುವುದು ಕಂಡುಬರುವುದು. ಯಾವುದೇ ಧಾರ್ಮಿಕ ಕಾರ್ಯದ ಅದು ಹಬ್ಬಗಳ ಆಚರಣೆಗಳಲ್ಲಾಗಲಿ, ವ್ರತಾಚರಣೆಗಳಲ್ಲಾಗಲಿ ಮಹಿಳೆಯರ ದ್ವಿತೀಯ ಸ್ಥಾನವನ್ನು ಹೊಂದಿದ್ದು, ಪುರುಷರು ಮಾತ್ರ ಎಲ್ಲಾ ಧಾರ್ಮಿಕ ಕಾರ್ಯದಲ್ಲಿ ಮೊದಲ ಸ್ಥಾನವನ್ನು ಹೊಂದಿದ್ದಾರೆ. ಧರ್ಮವು ಅನೇಕ ರೀತಿಯ ನಿಯಮಗಳನ್ನು ಬೋಧಿಸುವುದರ ಮೂಲಕ ಮಹಿಳೆಯರನ್ನು ನಿಯಂತ್ರಣದಲ್ಲಿರಿಸಿಕೊಂಡಿರುವುದನ್ನು ಕಾಣಬಹುದು.

## ಅಡಿಟಿಪ್ಪಣಿ


೧. ಸ.ಚಿ.ರಮೇಶ; ಅಲೆಮಾರಿ ಸ್ಥಿತಿಗತಿಗಳು; ಪು.ಸಂ. ೧೩೬

೨. ಆರ್. ಇಂದಿರಾ; ಮಹಿಳೆ ಸಮಾಜ ಮತ್ತು ಸಂಸ್ಕೃತಿ; ಪು.ಸಂ. ೯೯

೩. ಜ್ಯೋತಿ ಶಶಿಕುಮಾರ; ಮಹಿಳಾ ಸಾಮಾಜಿಕತೆ; ಪು.ಸಂ. ೧೨೫

೪. ಅದೇ, ಪು.ಸಂ. ೧೨೬

೫. ಮಾಹಿತಿನೀಡಿದವರು ಮಾನಪ್ಪ ಚೌವ್ಹಾಣ

೬. ಮಾಹಿತಿ ನೀಡಿದವರು ಶಂಕರ ಹರಿಣಶಿಕಾರಿ

೭. ಎನ್.ಗಾಯತ್ರಿ; ಮಹಿಳೆ ಬಿಡುಗಡೆಯ ಹಾದಿಯಲ್ಲಿ; ಪು.ಸಂ. ೩೮

೮. ಪ್ರಹ್ಲಾದ ಬೆಟಗೇರಿ; ಅಡವಿ ಬೆಂಚರ ಸಂಸ್ಕೃತಿ; ಪು.ಸಂ. ೮೦

೯. ಅದೇ, ಪು.ಸಂ. ೮೧

೧೦. ಕೆ. ಸರೋಜಾ; ಮಹಿಳಾ ಆರೋಗ್ಯ; ಪು.ಸಂ. ೨೩
೧೧. ಆರ್. ಇಂದಿರಾ; ಮಹಿಳೆ ಸಮಾಜ ಮತ್ತು ಸಂಸ್ಕೃತಿ; ಪು.ಸಂ. ૩೬
೧೨. ಎಚ್.ಎಸ್.ಶ್ರೀಮತಿ; ಚಹರೆ; ಪು.ಸಂ. ೧೦೪
೧೩. ಅದೇ, ಪು.ಸಂ. ೧೦೪
೧೪. ಗಾಯತ್ರಿ ನಾವಡ; ವಿರಚನೆ; ಪು.ಸಂ. ೬

## ಅಧ್ಯಾಯ ಐದು

# ರಾಜಕೀಯ ಬದುಕು

೫.೧ ಭಾರತ ಸಂವಿಧಾನ ಮ್ತು ಮೀಸಲಾತಿ

೫.೨ ಪಂಚಾಯತ್ ರಾಜ್ ವ್ಯವಸ್ಥೆ ಮತ್ತು ಹರಿಣಶಿಕಾರಿ ಮಹಿಳೆ

೫.೩ ಸಮುದಾಯದ ಒಳಾಡಳಿತ ವ್ಯವಸ್ಥೆ ಮತ್ತು ಹರಿಣಶಿಕಾರಿ ಮಹಿಳೆ

ಭಾರತದ ಇತಿಹಾಸದುದ್ದಕ್ಕೂ ರಾಜಿಕೀಯ ಸ್ಥಾನಮಾನದಲ್ಲಿ ಅನೇಕ ಏರಿಳಿತವನ್ನು ಕಾಣಬಹುದು. ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರ ಮತ್ತು ಪುರುಷರ ಭಾಗವಹಿಸುವಿಕೆಯ ಮೇಲೆ ಆಯಾ ಕಾಲದ ಸಾಮಾಜಿಕ ಸ್ಥಾನಮಾನವನ್ನು ತಿಳಿಯಬಹುದು. ಯಾವುದೇ ಒಂದು ಸಮಾಜದ ಅಭಿವೃದ್ದಿಯ ಮಟ್ಟವನ್ನು ತಿಳಿಯಾಬೇಕಾದರೆ ಅಲ್ಲಿ ಮಹಿಳೆಯರ ಸ್ಥಾನಮಾನವು ಉನ್ನತ ಹಂತದಲ್ಲಿರಬೇಕು. ಆಯಾ ಸಮಾಜದ ಸಮಾನವಾದ ಅವಕಾಶವನ್ನು ಕಲ್ಪಿಸಬೇಕು. ಇತಿಹಾಸದುದ್ದಕ್ಕು ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರು ಭಾಗವಹಿಸುವಿಕೆಯನ್ನು ನೋಡಿದಾದ ಅಲ್ಲಿ ಕೇಲವೇ ಕೆಲವು ಮಹಿಳೆಯರ ಹೆಸರು ಕೇಳಿಬರುವುದು. ಹಾಗಂತ ರಾಜಕೀಯದಲ್ಲಿ ಮಹಿಳೆಯರ ಕೊಡುಗೆ ಇಲ್ಲವೇ ಎಂಬ ಪ್ರಶ್ನೆ ಮೂಡುವುದು ಸಹಜ ರಾಜಕೀಯದಲ್ಲಿ ಮಹಿಳೆಯರು ಪ್ರವೇಶ ಪಡೆದು ಅನೇಕ ಹೋರಾಟಗಳಲ್ಲಿ ತೊಡಗಿದರೂ ಕೂಡ ಚರಿತ್ರೆಯಲ್ಲಿ ಅಂಥಹ ವಿಷಯಗಳನ್ನು ದಾಖಲಿಸದೇ ಇರುವುದು ವಿಷಾದನೀಯ. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರನ್ನು ಕೇವಲ ದೈವಿಕ ಘಟಕವನ್ನಾಗಿ ನೋಡಿದರೇ ಹೊರತು ಅವಳನ್ನು ಒಬ್ಬ ಸ್ವತಂತ್ರ್ಯ ಜೀವಿಯಾಗಿ ನೋಡಲಿಲ್ಲ. ಸಮಾಜದಲ್ಲಿ ಮಹಿಳೆಯನ್ನುಹಿ ತಾಯಿಯಾಗಿ, ಹೆಂಡತಿಯಾಗಿ, ಕುಟುಂಬಕ್ಕೆ ಸಂಪಾದಿಯಾಗಿ ಪರಿಭಾವಿಸಿಕೊಳ್ಳಲಾಗಿದೆ. ಹೆಂಡತಿಯನ್ನು ಅನೇಕ ಗಂಡಂದಿರು ನನ್ನ ಕುಟುಂಬವೆಂದು ಪರಿಚಯಿಸುವುದು ರೂಡಿಯಲ್ಲಿದೆಹಿ[೧] ಹೀಗೆ ಮಹಿಳೆಯರ ಸಾಮಥ್ಯ, ಶಕ್ತಿಯನ್ನು ಕುಟುಂಬದ ಚೌಕಟ್ಟಿನಲ್ಲಿ ಬಂದಿಸುವುದರ ಮೂಲಕ ಮಹಿಳೆಯರ ರಾಜಕೀಯ ಪ್ರವೃತ್ತಿಯನ್ನು ಹತ್ತಿಕ್ಕಲು ಪ್ರಯತ್ನಿಸಾಲಾಗಿದೆ.

ಭಾರತವು ಪ್ರಜಾಪ್ರಭುತ್ವ ರಾಜಕೀಯ ವ್ಯವಸ್ಥೆಯನ್ನು ಹೊಂದಿದೆ. ಭಾರತೀಯ ರಾಜಕೀಯ ಶಕ್ತಿ ಪ್ರಜೆಗಳ ಮೂಲಕವೇ ರೂಪಿತವಾಗಿರುವುದು. ಈ ಪ್ರಜಾಪ್ರಭುತ್ವ ವ್ಯವಸ್ಥೆಯ ಮಹಿಳೆ ಮತ್ತು ಪುರುಷರಿಗೆ ಸಮಾನವಾದ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಆದರೂ ಕೂಡಾ ಕೆಲವು ಸಂದರ್ಭಕ್ಕೆ ಪರಿಸ್ಥಿತಿಗಳು ಮಹಿಳೆಯರನ್ನು ರಾಜಕೀಯ ಕ್ಷೇತ್ರದಿಂದ ದೂರುಳಿಯುವಂತೆ ಮಾಡಿವೆ. ಭಾರತದ ಸ್ವತಂತ್ರ್ಯ ಚಳುವಳಿಯ ಮಹಿಳೆಯರು ಭಾಗವಹಿಸಿದರು ಪುರುಷರಷ್ಟೇ ಸಮರ್ಥವಾದ ಕಾರ್ಯ ನಿರ್ವಹಿಸಿದರು. ಭಾರತಕ್ಕೆ ಸ್ವತಂತ್ರ್ಯ ದೊರೆತ ನಂತರ ಮಹಿಳೆಯರನ್ನು ಕೇವಲ ಕುಟುಂಬ ವಲಯಕ್ಕೆ ಸೀಮಿತಗೂಳಿಸಲಾಯಿತು. ಪುರುಷರು ಸಾರ್ವಜನಿಕ ವಲಯಕ್ಕೆ ಪ್ರವೇಶಪಡೆದರು. ವಿಇಪ್ಪತ್ತೊಂದನೆ ಶತಮಾನದ ಆದಿಯಲ್ಲಿ ನಿಂತು ಇಪ್ಪತ್ತರ ಆಗುಹೊಗುಗಳನ್ನು ಗಮನಿಸಿದರೆ ಒಟ್ಟಾರೆಯಾಗಿ ಜನರಲ್ಲಿದ್ದ ದೇಶಪ್ರೇಮವೇ ಆಗಿನ ಮಹಿಳೆಯಲ್ಲೂ ಹರಿಯುತ್ತಿದ್ದರಿಂದ ಅವಳು

ಸ್ತ್ರೀಯು ರಾಜಕಾರಣದಲ್ಲಿ ತನನ್ನು ತೊಡಗಿಸಿಕೊಂಡಿದ್ದಳು. ಆದರೆ, ಇದಕ್ಕೆ ರಾಜಕಾರಣ ಎನ್ನುವ ತುಟಿಯಿರಲಿಲ್ಲ. ಬದಲು, ಸ್ವಾತಂತ್ರ್ಯ ಹೋರಾಟಗಾರರು ಎಂಬ ಬಿರುದು ಅವರ ಮೇಲಿತ್ತುಹಿ.[೨] ಸ್ವತಂತ್ರ್ಯ ಹೋರಾಟಗಳಲ್ಲಿ ತೊಡಗಿದ ಮಹಿಳೆಯರ ರಾಜಕೀಯ ಗುಣವನ್ನು ಸಾರ್ವತ್ರಿಕಗೊಳಿಸಲಾಯಿತು. ಮಹಿಳೆಯರಿಗೆ ಸಂವಿಧಾನಾತ್ಮಕ ಅನೇಕ ಹಕ್ಕು, ಸವಲತ್ತುಗಳನ್ನು ನೀಡಿದರೂ ಕೂಡಾ ರಾಜಕೀಯ ಕ್ಷೇತ್ರದಿಂದ ದೂರುಳಿದಿದ್ದಾರೆ.

## ಭಾರತ ಸಂವಿಧಾನ ಮತ್ತು ಮಹಿಳಾ ಮೀಸಲಾತಿ

ಶತ ಶತಮಾನಗಳಿಂದ ಸಾಮಾಜಿಕ, ಶೈಕ್ಷಣಿಕ, ರಾಜಕೀಯ ಮುಂತಾದ ಅವಕಾಶಗಳನ್ನು ಸಮಾನವಾಗಿ ಜನಸಮುದಾಯಗಳಿಗೆ ಸಿಗುವ ಹಾಗೇ ಸಂವಿಧಾನಾತ್ಮಕ ನಿಯಮಗಳು ಒಳಪಟ್ಟಿರುವುದು. ಸಂವಿಧಾನದ ಎಲ್ಲಾ ಅಂಶಗಳು ಸಮಾಜದ ಸಂದರ್ಭದಲ್ಲಿ ಅದರಲ್ಲೂ ಹಿಂದುಳಿದ ವರ್ಗಗಳ ಅಭಿವೃದ್ದಿಗಾಗಿ ವಿಶೇಷವಾದ ಕಾಳಜಿಯನುವಹಿಸಿರುವುದನ್ನು ಕಾಣಬಹುದು. ಸಂವಿಧಾನಾತ್ಮಕವಾಗಿ ಮಹಿಳಾ ಪರ ಕಾಳಜಿಗಳು, ಮಹಿಳಾ ಮೀಸಲಾತಿಯ ಸಂವೇದನೆಗೆ ಸಂಬಂದಿಸಿದಂತೆ ಅನೇಕ ಅವಕಾಶಗಳನ್ನು ಕಲ್ಪಿಸಲಾಗಿದೆ.

ವಿಸಂವಿಧಾನವು ಸ್ತ್ರೀಯರಿಗೆ ಸಮಾನತೆಯನೆಷ್ಟೆ ಅಲ್ಲ, ಸರಕಾರವು ಮಹಿಳೆಯರ ಪರವಾಗಿ ತಾರತಮ್ಯ ತೋರಲು ಅವಕಾಶ ಮಾಡಿಕೊಟ್ಟಿದೆ. ಮೂಲಭೂತ ಹಕ್ಕುಗಳು ಕಾನೂನಿನ ಸಮಾನತೆ, ಸಮಾನ ಕಾನೂನಿನ ರಕ್ಷಣೆ ನೀಡಿ ಜಂಡರ್ ಅಧಾರದ ಮೇಲೆ ತಾರತಮ್ಯ ತೋರುವುದನ್ನು ನಿಷೆಧಿಸುತ್ತದೆ. ಉದ್ಯೋಗದಲ್ಲಿ ಸಮಾನ ಅವಕಾಶ ಕಲ್ಪಿಸಕೊಟ್ಟದೆ."[೩] ಮಹಿಳೆಯರಿಗೆ ಅನ್ವಯವಾಗುವ ಸಂವಿಧಾನದ ಕೇಲವು ಅನುಚ್ಚೇದಗಳೇಂದರೆ –

೧. ಅನುಚ್ಚೇದ (೧೪) ರಾಜಕೀಯ, ಅರ್ಥಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಸ್ತ್ರೀ ಪುರುಷರಿಬ್ಬರಿಗೂ ಸಮಾನ ಹಕ್ಕು ಮತ್ತು ಅವಕಾಶಗಳನ್ನು ಕಲ್ಪಿಸಿಕೊಡುತ್ತದೆ.
೨. ಅನುಚ್ಚೇದ (೧೫) ಧರ್ಮ ಜಾತಿ, ಜನಾಂಗ ಮತ್ತು ಜಂಡರ್ ಆಧಾರದ ಮೇಲೆ ಯಾವುದೇ ವ್ಯಕ್ತಿಯ ವಿರುದ್ದ ತಾರತಮ್ಯ ಮಾಡುವಂತಿಲ್ಲ.

ವಿಭಾರತದ ಸಂವಿಧಾನದ ರಚನೆಯಾಗುವಾಗ ಅನುಚ್ಚೇದ ೧೫(೩)ರಲ್ಲಿ ಮಹಿಳಾಪರ ಉಪವೃಂದಗಳನ್ನು ಕಲ್ಪಿಸಲಾಗಿದೆ. ಈ ನಿಟ್ಟಿನಲ್ಲಿ ಲೋಕಸಭೆ ಮತ್ತು ವಿಧಾನಸಭೆಗಳ ಮಹಿಳಾ ಮೀಸಲಾತಿ ವಿಧೇಯಕ ಅ ಸಂವಿಧಾನಿಕದಲ್ಲ. ಈ ಮಹಿಳಾ ಮೀಸಲಾತಿ ವಿಧೇಯಕ ೪ ಅಂಶಗಳನ್ನು ಒಳಗೊಂಡಿದೆ.

೧. ಸಂವಿಧಾನಕ್ಕೆ ತಿದ್ದುಪಡಿ ಮಾಡುವ ಮೂಲಕ ಲೋಕಸಭೆ, ವಿಧಾನ ಸಭೆಗಳ ಒಟ್ಟು ಸ್ಥಾನಗಳ ಮೂರನೆಯ ಒಂದು ಸ್ಥಾನವನ್ನು ಮಹಿಳೆಯರಿಗೆ ಮೀಸಲಿಡುವುದು.

೨. ಈ ಮೀಸಲಾತಿಯ ಅನಿರ್ದಿಷ್ಟಾವಧಿ ತನಕ ವಿಸ್ತರಿಸುತ್ತದೆ.

೩. ಮಹಿಳಾ ಮೀಸಲು ಕ್ಷೇತ್ರಗಳನ್ನು **'ಚೀಟಿಎತ್ತುವ'** ಮುಲಕ ನಿರ್ದರಿಸಲಾಗುತ್ತದೆ. ಪ್ರತಿ ಚುನಾವಣೆಯಲ್ಲಿ ಮೀಸಲು ಕ್ಷೇತ್ರವನ್ನು ಬದಲಾಯಿಸಲಾಗುತ್ತದೆ.

೪. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಈಗಾಗಲೇ ಶಾಸನ ಸಂವಿಧಾನದಲ್ಲಿ ಕಲ್ಪಿಸಿರುವ ರಾಜಕೀಯ ಮೀಸಲಾತಿಯಲ್ಲಿ ಮೂರನೆಯ ಒಂದು ಸ್ಥಾನವನ್ನು ಆ ಜಾತಿ, ಪಂಗಡಗಳ ಮಹಿಳೆಯರಿಗೆ ಮೀಸಲಿಡಬೇಕು.ಹಿ[೪]

ಮಹಿಳಾ ಮೀಸಲಾತಿಗೆ ಸಂಬಂಧಿಸಿದಂತೆ ಸಂವಿಧಾನದಲ್ಲಿ ಪ್ರತ್ಯೇಕವಾಗಿ ಹೇಳಿರುವುದನ್ನು ಕಾಣಬಹುದು. ರಾಜಕೀಯ ಚುನಾವಣೆ ಸಂದರ್ಭದಲ್ಲಿ ಮಹಿಳೆಗೆ ಮೀಸಲೀರಿಸಿದ ಹಕ್ಕುಗಳನ್ನು ನೀಡಿದರೆ ಮಾತ್ರ ಮಹಿಳೆಯರಿಗೆ ಮೀಸಲಾತಿದೊರೆಯಲು ಸಾದ್ಯವಾಗುವುದು. ಮಹಿಳಾ ಮೀಸಲಾತಿ ಕುರಿತು ಅನೇಕ ಚರ್ಚೆಗಳು ಚಿಂತನೆಗಳು ನಡೆದವು ಅದರೂ ಕೂಡಾ ಮಹಿಳಾ ಮೀಸಲಾತಿಯ ಬಗ್ಗೆ ಸ್ಪಷ್ಟವಾದ ಚಿತ್ರಣವನ್ನು ನೀಡಲು ಸಾಧ್ಯವಾಗಿಲ್ಲ.

೧೯೮೬ರಲ್ಲಿ ಕೇಂದ್ರದಲ್ಲಿ ಹೊಸ ಸರಕಾರ ಅಧಿಕಾರಕ್ಕೆ ಬಂದಾಗ ಸಂವಿಧಾನದ ೮೧ನೇ ತಿದ್ದುಪಡಿ ಮಸುದೆ ಶಾಸನಸಭೆ ಮತ್ತು ಲೋಕ ಸಭೆಗೆ ೩೩% ಮಹಿಳಾ ಮೀಸಲಾತಿ ಕೋಡಬೇಕೆಂಬ ವಿಷಯವನ್ನು ಪ್ರಸ್ತಾಪಿಸಲಾಯಿತು. ನಂತರ ಶರದಯಾದವ ಮತ್ತು ಲಾಲೂ ಪ್ರಸಾದ್ ಅವರು ಮಂಡಿಸಿದ ೩೩% ಮಹಿಳಾ ಮೀಸಲಾತಿಯಲ್ಲಿಯ ಹಿಂದುಳಿದ ಮಹಿಳೆಯರಿಗೆ ಮೀಸಲಾತಿಯನ್ನು ಕಡ್ಡಾಯಗೊಳಿಸಬೇಕೆಂಬ ವಿಚಾರವನ್ನು ಬಲವಾಗಿ ವ್ಯಕ್ತಪಡಿಸಿದರೂ ಕೂಡಾ ಮಹಿಳೇಯರಿಗೆ ಈ ಮೀಸಲಾತಿ ನೀಡುವಲ್ಲಿ ಹಿಂದೇಟು ಹಾಕುತ್ತಿದೆ. ಪುರುಷ ಕೇಂದ್ರಿತ ನಿಲುವುಗಳು ರಾಜಕೀಯ ವಲಯಕ್ಕೆ ಮಹಿಳೆಯರು ಬರದಂತೆ ತಡೆಗಟ್ಟಿರುವುದು ಇದಕ್ಕೆ ಮುಖ್ಯ ಕಾರಣವಾಗಿದೆ.

ಮಹಿಳೆಯರಿಗೆ ೩೩% ರಷ್ಟು ಮೀಸಲಾತಿ ನೀಡುವಂತ ಸಂದರ್ಭದಲ್ಲಿ ಸಮಾಜದಲ್ಲಿಯ ಅನೇಕ ಮಿಥ್ಯಗಳು ರೂಡಿಗತ ಸಂಪ್ರದಾಯಗಳು ಮಹಿಳೆಯರ ರಾಜಕೀಯ ಪ್ರವೇಶದಿಂದ ದೂರವಿಡುವಲ್ಲಿ ಮುಖ್ಯ ಕಾರಣಗಳಾಗಿವೆ. ಮಹಿಳೆಯರು ರಾಜಕೀಯ ಪ್ರವೇಶ ಮಾಡಿದರೆ ದೇಶದ ಪ್ರಗತಿಗೆ, ಅಭಿವೃದ್ದಿಗೆ ಮಾರಕ, ಕುಟುಂಬ ವ್ಯವಸ್ಥೆಗೆ ದೊಡ್ಡ ಕುಂದು ಎಂಬ ನಿಲುವು ಪುರುಷ ಶಾಹಿತನ್ನದೆ ಅಗಿದೆ. ಇವರ ದೃಷ್ಟಿಯಲ್ಲಿ ದೇಶದ ಅಭಿವೃದ್ದಿ ಪುರುಷರ ಸೋತ್ತು ಇಲ್ಲಿಗೆ ಮಹಿಳಾ ಪ್ರವೇಶ ಕೂಡಾ ನಿಷೆದ. ಇವರಿಗೆ ವಿಮಹಿಳೆ ಎಂದರೆ ಸೆರಗಿನಿಂದ ತಲೆ ಬಾಯಿ ಮುಚ್ಚಿಕೊಂಡು ಅಥವಾ ಬುರ್ಖಾದಿಂದ ಮುಖ ಮೈತುಂಬ ಮುಚ್ಚಿಕೊಂಡು ತನ್ನೆಲ್ಲ ಆಜ್ಞೆಗೆ ಗೋಣಾಡಿಸುವವಳುಹಿ[೫] ಹೀಗೆ ಪ್ರತಿಯೊಂದು ವಸ್ತು ವಿಷಯವನ್ನು ಧಾರ್ಮಿಕ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ಪರಿಭಾವಿಸಿಕೊಳ್ಳುವ ಪುರಷ ಪ್ರಧಾನತೆ ಮತ್ತೆ ಮಹಿಳೆಯರನ್ನು ಸಾಂಪ್ರದಾಯಿಕತೆಗೆ ಒಳಗಾಗುವಂತೆ ನಿರ್ದೆಶಿಸುತ್ತದೆ.

ಮಹಿಳೆಯರನ್ನು ರಾಜಕೀಯ ಕ್ಷೇತ್ರದಲ್ಲಿ ಭಾಗವಹಿಸುವವಳಾಗಿ, ಮತದಾರಳಾಗಿ ನೋಡಿದಾಗ ಅಲ್ಲಿ ಅವರ ಶಕ್ತಿ ಸಾಮರ್ಥ್ಯದ ಬಗ್ಗೆ ತಿಳಿಯಬಹುದು. ಜಗತ್ತಿನ ಅರ್ಧದಷ್ಟಿರುವ ಮಹಿಳೆಯರು ರಾಜಕೀಯ ಕ್ಷೇತ್ರದಲ್ಲಿ ಭಾಗವಹಿಸಿದ ಮಿತಿಯನ್ನು ಗಮನಿಸಿದಾಗ ಅದು ಕೇವಲ ಬೆರಳೆಣಿಕೆಯಷ್ಟು ಮಾತ್ರ. ರಾಜಕೀಯ ಕ್ಷೇತ್ರವೆಂದರೇ ಪುರುಷ ಕ್ಷೇತ್ರವೆಂತಲ್ಲೇ ಪರಿಭಾವಿಸಿಕೊಂಡಿರುವ ಸಮಾಜ ಮಹಿಳೆಯರು ರಾಜಕೀಯ ಪ್ರವೇಶ ಪಡೆಯಬಾರದು, ಅದೊಂದು ಕೀಳಾದ ವ್ಯವಸ್ಥೆ ಎನ್ನುವ ಮಿಥ್ಯಗಳನ್ನು ಸಮಾಜದಲ್ಲಿ ಬಿತ್ತರಿಸುವುದರಿಂದ ಮಹಿಳೆಯರು ರಾಜಕೀಯ ರಂಗದಲ್ಲಿ ಕಡಿಮೆ ಸಂಖ್ಯೆಯಲ್ಲಿ ಕಂಡುಬರುವರು. ಮಹಿಳಾ ಮೀಸಲಾತಿಯನ್ನು ನೀಡಿದರೆ ಪ್ರತ್ಯೇಕವಾಗಿ ಮಹಿಳೆಯರಿಗೆ ಆಯಾ ಸೀಟುಗಳ ಹಂಚಿಕೆಯ ಪ್ರಕಾರ ಅಧಿಕಾರ ಸಿಕ್ಕಾಂತಾಗುವುದು. ಆದರೆ ಅಲ್ಲಿ ಸ್ಥಾಪಿತವಾಗಿರುವ ಪುರಷ ಸೀಟುಗಳನ್ನು ಕಸಿದುಕೊಂಡಂತಾಗುವುದು. ಆದ್ದರಿಂದ ಮಹಿಳೆಯರ ೩೩% ಮೀಸಲಾತಿಯಿಂದ ದೂರವಿಡಲು ಅನೇಕ ರೀತಿಯ ಹೊನ್ನಾರವನ್ನು ಪುರುಷ ರಾಜಕೀಯ ಬಳಸಿಕೊಂಡಿರುವುದನ್ನು ಕಾಣಬಹುದು.

ಮಹಿಳೆಯರು ಸಾಕ್ಷರತೆ, ವಿದ್ಯಾಭ್ಯಾಸ, ಕೌಟುಂಬಿಕ ಸ್ಥಿತಿ, ಆರ್ಥಿಕ ಸ್ಥಿತಿ ಹೀಗೆ ಮುಂತಾದ ಸಮಸ್ಯೆಗಳನ್ನು ಮುಂದಿಟ್ಟುಕೊಂಡು ಮಹಿಳೆಯರು ರಾಜಕೀಯ ಆಡಳಿತವನ್ನು ನಡೆಸುವಲ್ಲಿ ಸಮರ್ಥಳಲ್ಲ ಎನ್ನುವಂತ ನಿಲುವಿಗೆ ಬರುವರು. ಮಹಿಳೆಯು ಎಲ್ಲದರಲ್ಲು ಸಮರ್ಥಳಿದ್ದರೂ ಕೂಡಾ ರಾಜಕೀಯ ರಂಗದಲ್ಲಿ ಸ್ಪರ್ಧಿಸುವಲ್ಲಿ ಅನೇಕ ಅಡತಡೆಗಳನ್ನು ಎದುರಿಸಬೇಕಾಗುತ್ತದೆ. ಅಲ್ಲದೇ ಅನೇಕ ರೀತಿಯ ಸಮಸ್ಯೆಗಳಿಗೆ ಒಳಾಗಾಗುವ ತಾರತಮ್ಯ ನೀತಿ ಕಂಡುಬರುವುದು. ಇವನ್ನೆಲ್ಲ ತಡೆದು ಮಹಿಳೆಯರಿಗೆ ಪ್ರತ್ಯೇಕವಾಗಿ ೩೩% ರಷ್ಟು ಒಳಮೀಸಲಾತಿಯನ್ನು ನೀಡುವುದರಿಂದ ಅನೇಕ ಕೆಳವರ್ಗದ ಮಹಿಳೆಯರು ಕೂಡಾ ರಾಜಕೀಯ ರಂಗದಲ್ಲಿ ಪ್ರವೇಶವನ್ನು ಪಡೆಯಲು ಸಾಧ್ಯವಾಗುವುದು. ವೀಣಾ ಮಜುಂದಾರ್ ಹೇಳುವಂತೆ ವಿಸಾವಿರಾರು ವರ್ಷಗಳಿಂದ ಬೆಳೆದು ಬಂದಿರುವ ಸಂಪ್ರದಾಯಿಕ ಮೌಲ್ಯ ಮತ್ತು ನಡುವಳಿಕೆಯ ಕಟ್ಟು ಪಾಡುಗಳು ಮಹಿಳೆಯರು ತಮ್ಮನ್ನು ತಾವು ವ್ಯಕ್ತಿಗಳನ್ನಾಗಿ ಗುರುತಿಸಿಕೊಳ್ಳುವುದಕ್ಕೆ ಸಾದ್ಯಾವಾಗದಂತೆ ಮಾಡಿದೆ. ಈ ಪ್ರಕ್ರಿಯೆ ಹೆಚ್ಚು ಸಂಕೀರ್ಣಗೊಂಡಷ್ಟು ಮಹಿಳೆ ಮತ್ತು ರಾಜಕೀಯದ ಅಂತರ ಹೆಚ್ಚಾಗಿ ಅವರ ಭಾಗವಹಿಸುವಿಕೆ ಹೆಚ್ಚು ಕಷ್ಟವಾಗುತ್ತಾ ಹೋಗುತ್ತಾರೆಹಿ.[೬] ಈ ರೀತಿಯ ಪ್ರವೃತ್ತಿಯು ಕೂಡಾ ಮಹಿಳೆಯರನ್ನು ರಾಜಕೀಯ ಕ್ಷೇತ್ರದಿಂದ ದೂರುಳಿಯುವಂತೆ ಮಾಡುವುದಲ್ಲದೇ ಅನೇಕ ಧಾರ್ಮಿಕ ಕಟ್ಟುಪಾಡುಗಳು ಅವರನ್ನು ಸಾರ್ವಜನಿಕ ವಲಯಕ್ಕೆ ಪ್ರವೇಶಿಸದಂತೆ ಮಾಡಿದೆ.

## ಪಂಚಾಯತ್ ರಾಜ್ ವ್ಯವಸ್ಥೇ ಮತ್ತು ಹರಿಣ ಶಿಕಾರಿ ಮಹಿಳೆ :

ಪಂಚಾಯತ್ ರಾಜ್ ವ್ಯವಸ್ಥೆಯ ಉಗಮವು ರಾಜಕೀಯ ಕ್ಷೇತ್ರದಲ್ಲಿ ಒಂದು ಹೊಸ ತಿರುವು ಎಂತಲ್ಲೇ ಹೇಳಬಹುದು. ಕೇವಲ ಕೆಲವೇ ಜನರಿಗೆ ಮಾತ್ರ ರಾಜಕೀಯದಲ್ಲಿ ಪ್ರವೇಶ

ಪಡೆಯಲು ಅವಕಾಶಗಳು ದೊರಕುತ್ತಿದ್ದವು. ಆದೇ ಅಂತಹ ಆಧಿಕಾರ ಪಂಚಾಯತ್ ರಾಜ್ ಅಧಿನಿಯಮದಡಿಯಲ್ಲಿ ಸಾರ್ವತ್ರಿಕರ್ಣಗೋಳಿಸುವುದರ ಮೂಲಕ ಎಲ್ಲರಿಗೂ ರಾಜಕೀಯ ಆಡಳಿತದಲ್ಲಿ ಪ್ರವೇಶ ಹೊಂದಲು ಅವಕಾಶ ಕಲ್ಪಿಸಿಕೊಟ್ಟಿದೆ. ಆರಂಭದಿಂದಲೂ ಸಮಾಜದಲ್ಲಿ ಕೇವಲ ಮೇಲ್ವರ್ಗದ ಜನರು ಮಾತ್ರ ಕಂಡುಬರುತ್ತಿದ್ದರು. ಒಂದೆಡೆ ಕೆಳವರ್ಗದ ಜನರು ಆಡಳಿತ ರಂಗದಿಂದ ತಳಲ್ಪಟವರೇ ಆಗಿದ್ದರೂ, ಅದರಲ್ಲೂ ಕೆಳ ಸಮುದಾಯದ ಮಹಿಳೆಯರನ್ನು ಒಬ್ಬ ವ್ಯಕ್ತಿಯಾಗಿ, ಸ್ವತಂತ್ರ್ಯ ವ್ಯಕ್ತಿಯಾಗಿ ಪರಿಭಾವಿಸಿಕೊಳ್ಳುತ್ತಲೇ ಇರಲಿಲ್ಲ. ಪ್ರಭುತ್ವ ಹೊಂದಿದ ವ್ಯಕ್ತಿಗಳು ಕೆಳಸಮುದಾಯದವರ ಮೆಲಿನ ಶೋಷಣೆಗೆ ಕಾರಣಭೂತರಾಗುತ್ತಿದ್ದರು. ಅದರಲ್ಲೂ ಮಹಿಳೆಯ ಜೈವಿಕತೆಯ ಕಾರಣದಿಂದ ಸಮಾಜವು ಮಹಿಳೆಯನ್ನು ಕೇವಲ ಸಾಂಪ್ರದಾಯಿಕ ನೆಲೆಯಲ್ಲೇ. ಪರಿವಿಕ್ಷಿಸಲಾಗುತ್ತಿತ್ತು, ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರನ್ನು ಧಾರ್ಮಿಕ ಪರಿದಿಯಲ್ಲಿ ಬುಂದಿಸುವುದರ ಮೂಲಕ ಕುಟುಂಬ ವಲಯಕ್ಕೆ ಸೀಮಿತಗೊಳಿಸಲಾಯಿತು. ಸ್ಮೂತಿಕಾರರಾದ ಮನುವಿನಂತವರು ಮಹಿಳಾ ವಿರೋದ ಅನೇಕ ಕಾನೂನುಗಳನ್ನು ರೂಪಿಸುವುದರ ಮೂಲಕ ಮಹಿಳೆಯರನ್ನು ಇನ್ನಷ್ಟು ಅಂಚಿಗೆ ತಳ್ಳಲಾಗಿದೆ ಮನುಸ್ಮೃತಿಯಂತಹ ಕಾನೂನು ಪುಸ್ತಕಗಳಲ್ಲಿ ದಾಖಲಾದ ಮಾಹಿತಿ ಪ್ರಕಾರ

ಮಾತ್ರಸ್ವಸ್ರಾ ಮಹಿತ್ರಾವಾದ ವಿವಕ್ತಸನೋ ಭವೇತ್

ಬಲಾವಾನಿಂದ್ರಿಯ ಗ್ರಾಮೋವಿದ್ವಾಂಸಮಡಿಕರ್ಪತಿಹಿ

ಇಂತಹ ವಿಚಾರಗಳು ಮಹಿಳೆಯನ್ನು ಶಿಕ್ಷಣ ಕ್ಷೇತ್ರದಿಂದ, ಸಾಮಾಜಿಕ ಕ್ಷೇತ್ರದಿದ ದೂರವಿಡುವಲ್ಲಿ ಪುರುಷ ರಾಜಕೀಯ ತಂತ್ರಗಾರಿಕೆಯನ್ನು ಬಳಸಿಕೊಂಡಿರುವುದನ್ನು ಗಮನಿಸಬಹುದು.

೧೯೯೨ ರಲ್ಲಿ ಸಂವಿಧಾನದ ಅನುಚ್ಛೇದ ೭೩,೭೪ ಕ್ಕೆ ತಿದ್ದುಪಡಿ ತರಲಾಯಿತು. ಸ್ಥಳೀಯ ಆಡಳಿತ ಸಂಸ್ಥೆಗಳಲ್ಲಿ ಮಹಿಳೆಯರಿಗೆ ೩೩% ಮೀಸಲಾತಿಯನ್ನು ನೀಡಲಾಯಿತು. ಇದೇ ಉಪಕ್ರಮವನ್ನು ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ವಿಸ್ತರಿಸಲಾಯಿತು. ಇದು ಮಹಿಳಾ ಸಬಲೀಕರಣಕ್ಕೆ ಹೊಸ ನಾಂದಿಯಾಯಿತು. ಮುಂದೆ ೧೯೯೩ ರಲ್ಲಿ ಕರ್ನಾಟಕ ಸರಕಾರ ಪಂಚಾಯತ್ ರಾಜ್ ಅಧಿನಿಯಮವನ್ನು ಜಾರಿಗೆಗೊಳಿಸಿ ಪರಿಶಿಷ್ಠ ಜಾತಿ, ಪರಿಶಿಷ್ಟ ವರ್ಗ ಹಾಗೂ ಮಹಿಳೆಯರಿಗೆ ೨೫% ರಾಜಕೀಯ ಮೀಸಲಾತಿಯನ್ನು ಜಾರಿಗೆಗೋಳಿಸಿತು. ವಿಸ್ಥಳೀಯ ಆಡಳಿತ ಮಹಿಳಾ ಮೀಸಾಲಾತಿ ಪ್ರಕ್ರಿಯೆಯನ್ನು ಮುಂದುವರಿಕೆಗಾಗಿ ಶಾಸನಸಭೆ ಹಾಗೂ ಲೋಕಸಭೆಗಳಲ್ಲಿ ಮಹಿಳಾ ಮೀಸಲಾತಿ ಕಲ್ಪಿಸುವ ಬಗ್ಗೆ ಯೋಚಿಸಲಾಯಿತು. ಸಾರ್ವಜನಿಕ ಮಹಿಳಾ ಮೀಸಲಾತಿ ಪ್ರಸ್ತಾಪವಾದ್ದಂತೆ ರಾಜಕೀಯ ಪಕ್ಷಗಳು ಎಚ್ಚರಗೊಂಡವು ಮಹಿಳೆಯರನ್ನು ಓಟ್‌ಬ್ಯಾಂಕ್‌ಗಳಾಗಿ ಪರಿವರ್ತಿಸಿದವುಹಿ[೭] ಹೀಗೆ ಮಹಿಳೆಯರನ್ನು ಓಟ್‌ಬ್ಯಾಂಕ್‌ಗಳಾಗಿ ನೋಡಿದರೂ ಕೂಡಾ ಮಹಿಳೆಯರ ಉನ್ನತ ಮಟ್ಟದ ಮೀಸಲಾತಿ ಸಂದರ್ಭದಲ್ಲಿ ಅನೇಕ ಅಡತಡೆಗಳನ್ನು ತಂದೊಡ್ಡಿದ್ದವು.

ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ೩೩% ಮೀಸಲಾತಿ ನೀಡಿ, ರಾಜಕೀಯ ವಲಯಕ್ಕೆ ಪ್ರವೇಶ ಪಡೆಯುವಂತೆ ಮಾಡಿದರೂ ಕೂಡಾ ಅವಳ ನಿರ್ಧಾರಕ್ಕೆ ಯಾವುದೇ ಬೆಲೆಯಿಲ್ಲದಂತೆ ಕೇವಲ ಅಧಿಕಾರದ ಹೆಸರಿಗೆ ಮಾತ್ರ ಅವರನ್ನು ಸೀಮಿತಗೊಳಿಸಿದ್ದು, ಎಲ್ಲಾ ಕೆಲಸ ಕಾರ್ಯಗಳನ್ನು ಪುರುಷರೆ ನಿಭಾಯಿಸುವಂತಾಗಿದೆ. ಇಲ್ಲಿ ಕೂಡಾ ಮಹಿಳೆಯರಿಗೆ ಯಾವುದೇ ಅಧಿಕಾರವನ್ನು ನೀಡದೇ ಅವರನ್ನು ಅಂಚಿಗೆ ತಳ್ಳಲಾಗಿದೆ ಗ್ರಾಮ ಪಂಚಾಯತಿಯಲ್ಲಿ ಕೆಳವರ್ಗದ ಮಹಿಳೆಯರು ಅನೇಕ ಸಭೆಗಳಲ್ಲಿ ಕಾರ್ಯಕ್ರಮಗಳಲ್ಲಿ ಮಾತನಾಡಲು ಭಾಗವಹಿಸಲು ಹಿಂದೆಟು ಹಾಕುತ್ತಿದ್ದಾರೆ.

ಗ್ರಾಮ ಪಂಚಾಯತಿಯಲ್ಲಿ ಕೇವಲ ಮಹಿಳೆಯರಿಗೆ ಮೀಸಲಾತಿ ಎನ್ನುವ ಕಾರಣದಿಂದ ತಮ್ಮ ಕುಟುಂಬದ ಮಹಿಳೆಯರನ್ನು ರಾಜಕೀಯ ರಂಗಕ್ಕೆ ಇಳಿಸುತ್ತಾರೆ. ಮತ್ತೆ ಎಲ್ಲಾ ಕಾರ್ಯ ಕೆಲಸಗಳನ್ನು ಪುರುಷರೇ ಮಾಡುತ್ತಾರೆ. ಇಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ, ಪುರುಷರು ತಮ್ಮ ಸ್ವಾರ್ಥಕೋಸ್ಕರ ಮಹಿಳೆಯರನ್ನು ರಾಜಕೀಯಕ್ಕೆ ಇಳಿಸುತ್ತಾರೆಯೇ ಹೊರತು ಮಹಿಳೆಯರ ಸ್ವಂತ ಹಿತಾಸಕ್ತಿಯ ಮೇರೆಗೆ ಅಲ್ಲ. ಅಲ್ಲಿ ಅವಳ ಪ್ರತಿಯೊಂದು ಚಟುವಟಿಕೆಯನ್ನು ಪುರಷರೇ ನಿಯಂತ್ರಿಸುತ್ತಾರೆ. ಹೀಗೆ ಮಹಿಳೆಯ ಸ್ವಂತ ಅಸ್ತಿತ್ವಕ್ಕೆ ಯಾವುದೇ ಬೆಲೆಯಿಲ್ಲದ್ದಂತೆ ನೋಡಿಕೊಳ್ಳುತ್ತಾರೆ. ಮೇಲ್ವರ್ಗದ ಮಹಿಳೆಯರ ಪರಿಸ್ಥಿತಿ ಒಂದೆಡೆಯಾದರೆ ಇನ್ನೊಂದೆಡೆ ಕೆಳ ಸಮುದಾಯದ ಮಹಿಳೆಯರ ಸ್ಥಿತಿಯು ವಿಭಿನ್ನವಾಗಿರುವುದು. ಕೆಳಸಮುದಾಯದ ಮಹಿಳೆಯರು ಮೇಲ್ವರ್ಗದ ಪುರುಷರ ದಬ್ಬಾಳಿಕೆಗೆ ಒಳಗಾಗುತ್ತಿದ್ದರೇ, ಇನ್ನೊಂದು ಕಡೆ ಮಹಿಳೆ ತನ್ನ ಕುಟುಂಬದ ಪುರುಷ ಅಥವಾ ಗಂಡನಿಂದಲ್ಲೇ ಮತ್ತೊಂದು ರೀತಿಯ ಕಿರುಕುಳಕ್ಕೆ ಒಳಗಾಗಿರುವುದನ್ನು ನೋಡಬಹುದು. ರಾಜಕೀಯ ವಲಯದಲ್ಲಿ ಮಹಿಳೆಯರಿಗೆ ಸಮಾನವಾದ ಅವಕಾಶವನ್ನು ಕಲ್ಪಿಸುವುದಕ್ಕಾಗಿ ಮೀಸಲಾತಿಯನ್ನು ಸಂವಿಧಾನಾತ್ಮಕವಾಗಿ ನೀಡಿದರೂ ಕೂಡಾ ಅದು ಸರಿಯಾದ ರೀತಿಯಲ್ಲಿ ಬಳಕೆಯಾಗದೇ ಇರುವುದು ವಿಷದನೀಯ. ಮಹಿಳೆಯರ ಸಬಲೀಕರಣದ ದೃಷ್ಟಿಯಿಂದ ದೊರೆತ ಈ ಮೀಸಲಾತಿಯನ್ನು ಪುರುಷ ಕೇಂದ್ರಿತ ರಾಜಕಾರಣ ತಮ್ಮ ಬಳಕೆಗಾಗಿ ವಸ್ತುವನ್ನಾಗಿ ಬಳಸಿಕೊಂಡಿರುವುದು ಗೋಚರವಾಗುತ್ತದೆ.

ಏಒಂದು ಸಾಮಾಜಿಕ ಅಧ್ಯಯನದ ಪ್ರಕಾರ, ಮಹಿಳೆಯರು ಅಧಿಕಾರದ ಚುಕ್ಕಾಣಿ ಹಿಡಿದ ಕಡೆಯಲ್ಲಿ ತಕ್ಕ ಮಟ್ಟಿಗೆ ಉತ್ತಮ ಆರೋಗ್ಯ, ಶಿಕ್ಷಣ, ನಿರ್ಮಲ ಪರಿಸರವನ್ನು ಜನರಿಗೆ ಕಲ್ಪಿಸಿಕೊಟ್ಟಿದ್ದಾರೆ. ಇದನ್ನು ಮೌಲ್ಯಮಾಪಕವನ್ನಾಗಿಸಿಕೊಂಡು, ಅವಳಿಗಿನ್ನೂ ಹೆಚ್ಚಿನ ಪ್ರಮಾಣದ ಅಧಿಕಾರ ನೀಡಿದರೆ ಹೇಗೆ ಎಂಬ ಯೋಚನೆ ಸಹಜ ಮತ್ತು ತಾರ್ಕಿಕವಾದುದುಹಿ.[೮] ಈ ರೀತಿಯ ವರ್ತನೆಯು ರಾಜಕೀಯ ವಲಯದ ಹಿತಕರವೆನ್ನುವುದು ಒಂದು ತರ್ಕಬದ್ದವಾದ ನಿಲುವು.

ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಸಮುದಾಯದ ಮಹಿಳೆಯರು ರಾಜಕೀಯದಲ್ಲಿ ಭಾಗವಹಿಸಿದರೂ ಕೂಡಾ ಅಲ್ಲಿ ಸ್ವಂತ ನಿರ್ಧಾರವಾಗಲ್ಲಿ, ಸ್ವ ಅಸಕ್ತಿಯಾಗಿಲ್ಲಿ ಇರುವುದಿಲ್ಲ ಆದರೂ ಕೂಡಾ ಪುರುಷರು ತಮ್ಮ ಅವಶ್ಯಕಕಗಳನ್ನು ಪೂರೈಸಿಕೊಳ್ಳಲು ಮಹಿಳೆಯರನ್ನು ಒಂದು ಸಾಧನವಾಗಿ ಬಳಕೆಮಾಡುತ್ತಾರೆ. ಹಾಗಂತ ಮಹಿಳೆಯರು ರಾಜಕೀಯದಲ್ಲಿ ಭಾಗವಹಿಸಲು ಸಮರ್ಥಳಲ್ಲ ಎಂತಲ್ಲ ಪುರುಷ ಪ್ರಧಾನ ಮೌಲ್ಯಗಳು ಮಹಿಳೆಯರನ್ನು ಆಳುವ, ನಿಯಂತ್ರಣದಲ್ಲಿಡುವ ಪ್ರಮುಖ ಹುನ್ನಾರಗಳನ್ನು ಬಳಕೆಮಾಡಿಕೊಂಡಿರುವುದು ಹರಿಣ ಶಿಕಾರಿ ಸಮೂದಾಯದಲ್ಲಿ ಮಹಿಳೆಯರು ಭಾಗವಹಿಸುವಿಕೆಯನ್ನು ನೋಡಿದಾಗ ಅದು ಸಂಪೂರ್ಣ ಪ್ರಮಾಣದಲ್ಲಿ ಇಲ್ಲಾ ಎಂತಲ್ಲೆ ಹೇಳಬಹುದು ಹರಿಣ ಶಿಕಾರಿ ಸಮೂದಾಯದಲ್ಲಿ ಮಹಿಳೆಯರನ್ನು ಎರಡನೇ ದರ್ಜೆಯ ಪ್ರಜೆಯನ್ನಾಗಿ ಕಾಣಲಾಗುವುದು. ಹರಿಣ ಶಿಕಾರಿ ಸಮೂದಾಯದ ಸಾಂಪ್ರದಾಯಿಕ ನೆಲೆಗಳು ಮಹಿಳೆಯರನ್ನು ಸಮಾಜಿಕ ಕ್ಷೇತ್ರದಿಂದ ಗೌಣ್ಯಗೊಳಿಸಿವೆ. ಹರಿಣ ಶಿಕಾರಿ ಮಹಿಳೆಯರು ರಾಜಕೀಯದಲ್ಲಿ ಭಾಗವಹಿಸುವಿಕೆಯ ಪ್ರಮಾಣವನ್ನು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ದೊರೆತ ಮಾಹಿತಿ ಪ್ರಕಾರ –

| ಮಹಿಳೆಯರ ಭಾಗವಹಿಸುವಿಕೆ | ಆವೃತ್ತಿ | ಶೇಕಾಡವಾರು |
|---|---|---|
| ಹೌದು | ೧ | ೧.೬೭ |
| ಇಲ್ಲ | ೫೯ | ೯೮.೩೩ |
| ಒಟ್ಟು | ೬೦ | ೧೦೦ |

ಈ ಮೇಲ್ಕಂಡ ಕೋಷ್ಠಕದ ಪ್ರಕಾರ ಕೇವಲ ಪ್ರತಿ ಒಂದರಷ್ಟು ಮಹಿಳೆ ಮಾತ್ರ ರಾಜಕೀಯ ಕ್ಷೇತ್ರದಲ್ಲಿ ಪ್ರವೇಶ ಪಡೆದಿದ್ದಾಳೆ. ಈ ಮಹಿಳೆ ರಾಜಕೀಯ ಕ್ಷೇತ್ರದಲ್ಲಿ ಪ್ರವೇಶ ಪಡೆದರು ಚುನಾವಣೆ ಸಂದರ್ಭದಲ್ಲಿ ಸೋಲು ಉಂಟಾಗಿರುವುದು. ಈ ಸಮೂದಾಯದ ಮಹಿಳೆಯರು ಮತದಾನ ಮಾಡುವುದಾಗಲಿ, ಭಾಗವಹಿಸುವುದಾಗಲಿ ತೀರಾ ಕಡಿಮೆ ಪ್ರಮಾಣದಲ್ಲಿರುವುದು. ಅವಳು ಪುರುಷನ ಕೈಗೊಂಬೆಯಾಗಿರುವುದು ನಿಜ ಅದು ಸಮುದಾಯದ ಸಾಮಾಜಿಕ ಸಂರಚನೆ ಹೌದು. ಮಹಿಳೆಯರನ್ನು ನಿಯಂತ್ರಣದಲ್ಲಿಡುವಲ್ಲಿ ಮಹಿಳೆ ರಾಜಕೀಯ ಪ್ರವೇಶ ಪಡೆದಿದ್ದಾಳೆಂದರೆ, ಅದು ಅವಳ ಸಶಕ್ತಿಕರಣ ಒಂದು ಅಂಶವಲ್ಲ. ಅದು ಪುರಷರಿಂದ ರಚಿತವಾದ ಒಂದು ರಾಜಕೀಯ ರಂಗ. ಒಂದೇ ಕಡೆ ಮಹಿಳೆಯನ್ನು ರಾಜಕೀಯ ಪ್ರವೇಶ ಪಡೆಯುವಂತೆ ಮಾಡಿದರೆ, ಇನ್ನೊಂದೆಡೆ ಅದೇ ಸಮುದಾಯದ ಜನರು ಆ ಮಹಿಳೆಯನ್ನು ಮುಂದುವರೆಯದಂತೆ ಮಾಡುವುದು. ಹೀಗೆ ಪ್ರಮುಖ ಸಂದರ್ಭದಲ್ಲಿ ಶೋಷಣೆ, ದಬ್ಬಾಳಿಕೆಗೆ ಒಳಗಾಗುವಳು ಮಹಿಳೆ ಮಾತ್ರ ವಿಚುನಾವಣೆ ಪ್ರಕ್ರಿಯೆಗಳಲ್ಲಿ ನಾವು ಪರಸ್ಪರ ವಿರುದ್ಧವಾದ ಎರಡು ಅಂಶಗಳನ್ನು ಕಾಣುತ್ತೇವೆ. ಒಂದೆಡೆ ಪ್ರಬುದ್ಧ ವಿಚಾರದಂತ ದಿಟ್ಟ

ಮಹಿಳೆಯಾದರೆ ಇನ್ನೊಂದೆಡೆ ರಬ್ಬರ್ ಸ್ಟಾಂಪ್ ನಂತಹ ಮಹಿಳೆ ಈ ಪ್ರಬುದ್ಧ ಮಹಿಳೆ ರಾಜಕೀಯಕ್ಕೆ ಬರುವುದಕ್ಕೆ ಕಾರಣವಾಗಿ ಆಕೆಯ ಗಂಡನೂ, ಸಹೋದರರೂ, ತಂದೇಯೋ, ಮಾವಾನೋ ಇರುತ್ತಾರೆಹ್ ಅಂದರೆ ಪ್ರತಿಯೊಂದು ಹಂತದಲ್ಲೂ ಪುರುಷ ರಾಜಕೀಯ ಅಂತಸ್ತಿಲ್ಲೆ ಮಹಿಳಾ ನೆಲೆಯನ್ನು ಪರಿಭಾವಿಸಿಕೊಳ್ಳಲಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಒಂದು ಕಡೆ ಅಧಿಕಾರವನ್ನು ನೀಡವುದಾದರೆ ಇನ್ನೊಂದೆಡೆ ಅದನ್ನು ಬೇರೆ ಬೇರೆ ಮೂಲಗಳ ಮೂಲಕ ಕಸಿದುಕೊಳ್ಳುವ ಅಂಶವನ್ನು ಕಾಣಬಹುದು.

## ಸಮುದಾಯದ ಒಳಾಡಳಿತವ್ಯವಸ್ಥೆ ಮತ್ತು ಹರಿಣ ಶಿಕಾರಿ ಮಹಿಳೆ

ಹರಿಣ ಶಿಕಾರಿ ಸಮುದಾಯದಲ್ಲಿ ಒಳಾಡಳಿತ ವ್ಯವಸ್ಥೆ ಕಂಡುಬರುವುದು. ಸಮಾಜದ ಮುಖ್ಯವಾಹಿನಿಯಿಂದ ದೂರವಿರುವ ಇವರು ತಮ್ಮದೇ ಆದಂತ ವಿಶೇಷವಾದ ಕಟ್ಟು ನಿಟ್ಟಾದ ಪಂಚಯಿತಿಯನ್ನು ಕಟ್ಟಿಕೊಂಡು ನ್ಯಾಯ ಒದಗಿಸುವ ಪದ್ಧತಿ ಕಂಡುವರುವುದು. ಪ್ರತಿಯೊಂದು ಬುಡಕಟ್ಟು ಸಮಾಜದಲ್ಲಿ ಇಲ್ಲವೇ ನ್ಯಾಯ ವ್ಯವಸ್ಥೆ ಇರುವುದನ್ನು ಗಮನಿಸಬಹುದು. ಪ್ರಾಚೀನ ಕಾಲದಿಂದಲ್ಲು ಬುಡಕಟ್ಟು ಮನಸ್ಸು ಸೂತ್ರಿಕೃತ ಕಾಯಿದೆಗಳಲ್ಲಿರುವ ಸಡಿಲತೆಗಳನ್ನು ಉಪಯೋಗಿಸಿಕೊಂಡು ಅಪರಾಧಿಯನ್ನು ಬಿಡುವ ಮಾರ್ಗವನ್ನು ಅನುಸರಿಸದೆ ಪ್ರತಿಕಾರ ದೃಷ್ಟಿಯಿಂದ ಶಿಕ್ಷಸುವ ಕಡೆಗೆ ಹೆಚ್ಚು ಗಮನ ಕೊಟ್ಟಿತೆಂಬ ಸತ್ಯವನ್ನು ಮರೆಮಾಡಬೇಕಾಗಿಲ್ಲಹಿ ಇಂತಹ ಮನೋಪ್ರವೃತ್ತಿಯನ್ನೇ ಅನುಸರಿಸಿಕೊಂಡು ಬಂದ ಅನೇಕ ಬುಡಕಟ್ಟು ಸಮೂದಾಯಗಳು ಒಂದೇ ರೀತಿಯ ಅಪರಾದ ಶಿಕ್ಷೆಯ ವಿಧಿಯಲ್ಲಿ ಬದಲಾವಣೆಯನ್ನು ತರುವುದರ ಮೂಲಕ ಇನ್ನೂ ಕೂಡ ಅಂತವಳ ಅಪರಾದ, ಶಿಕ್ಷೆಗೆ ಸಡಿಲತೆಯ ನಿಯಮವನ್ನು ಒದಗಿಸುವುದರೂಂದಿಗೆ ಆ ಕಾನೂನು ಚಾಲ್ತಿಯಲ್ಲಿರುವುದು ಕಂಡುಬರುವುದು. ಅನೇಕ ಬುಡಕಟ್ಟು ಸಮೂದಾಯಗಳು ತಮ್ಮ ತಮ್ಮ ಒಳಾಡಳಿತ ವ್ಯವಸ್ಥೆಯನ್ನು ಕಟ್ಟಿಕೊಳ್ಳುವುದರ ಮೂಲಕ ತಮ್ಮ ಅಂತರಿಕ ಜಗಳವನ್ನು ತಾವೇ ಬಗೆಹರಿಸಕೊಳ್ಳುವ ಪದ್ದತಿ ಕಂಡುಬರುವುದು.

ಹರಿಣಶಿಕಾರಿ ಸಮುದಾಯದ ಒಳಾಡಳಿತ ವ್ಯವಸ್ಥೆಯು ಸಮೂದಾಯದ ಒಬ್ಬ ಮುಖ್ಯಸ್ಥನಿಂದ ಕಾಯುವರಗೆ ರೂಪಕ್ಕೆ ಬರುವುದು. ಸಮೂದಾಯದ ಮುಖ್ಯಸ್ಥನಿಂದ ಕಾರ್ಯಚರಣೆಯ ರೂಪಕ್ಕೆ ಬರುವುದು. ದೊಡ್ಡಮನಿ ಎಂಬ ಅಡ್ಡ ಹೆಸರಿನಿಂದ ಕರೆಯಲಾಗುವುದು. ಪ್ರತಿಯೊಬ್ಬ ವ್ಯಕ್ತಿಯು ಇವನು ಹೇಳಿದಂತೆಯೇ ನಡೆದುಕೊಳ್ಳಬೇಕು. ಸಮುದಾಯದ ಪ್ರತಿಯೊಂದು ಕಲಹಗಳನ್ನು ಪಂಚಾಯಿತಿಯಲ್ಲಿ ನಿರ್ಧರಿಸುವುದರ ಮೂಲಕ ನ್ಯಾಯವನ್ನು ಒದಗಿಸಲಾಗುವುದು. ಸಮುದಾಯದ ಯಾವುದೇ ಕಲಹಗಳಾಲ್ಲಿ ಅದು ಜಗಳ, ಕಳ್ಳತನ, ದರೋಡೆ, ಮೋಸತನ, ಅನ್ಯೈತಿಕ ಸಂಬಂದ

ಆಸ್ತಿ ವಿಷಯಕ್ಕೆ ಸಂಬಂಧಿಸಿದಂತೆ, ಗಂಡ–ಹೆಂಡಂದಿರ ಜಗಳ, ಅಣ್ಣ–ತಮ್ಮಂದಿರ ಜಗಳ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಪಂಚರು ಮುಂದೆ ಪ್ರಕರಣವನ್ನು ಒಯ್ಯಲಾಗುವುದು. ಪ್ರಕರಣದ ಪ್ರತಿಯೊಂದು ವಿಷಯವನ್ನು ಗಮನಿಸಿ ನಂತರ ನಿರ್ಧಾರವನ್ನು ತೆಗೆದುಕೊಳ್ಳಲು ಪಂಚಾಯಿತಿ ಕೂಡಿಸುತ್ತಾರೆ. ಇದಕ್ಕೆ ಒಂದು ಸಮುಯವನ್ನು ನಿಗದಿಪಡಿಸಿ ಸಮುದಾಯದ ಜನರನ್ನು ಕರೆಯಿಸುವ ಒಂದು ವ್ಯವಸ್ಥೆಯನ್ನು ಇಲ್ಲಿ ಕಾಣಬಹುದು. ವಿಹರಿಣ ಶಿಕಾರಿ ಸಮುದಾಯದ ಸಾಮಾಜಿಕ ವ್ಯವಸ್ಥೆ ನೆಮ್ಮದಿ ಹಾಗು ಅದರ ಬೆಳವಣಿಗೆಗಾಗಿ ಪಂಚಾಯಿತಿ ವ್ಯವಸ್ಥೆಮಾಡಲಾಗಿದೆ. ಇದಕ್ಕೆ 'ಝ್ಯುತ್‌ನಿ ನ್ಯಾಯ' ಎಂದು ಕರೆಯುವರು.ಹಿ[೧೦] ಸಮುದಾಯದ ಪ್ರತಿಯೊಂದು ಕಾರ್ಯ ಕಲಾಪಗಳು ಪಂಚರ ಮುಖಾಂತರವೇ ನಿರ್ಧಾರ ಕೈಗೊಳ್ಳಲಾಗುವುದು. ಹರಿಣ ಶಿಕಾರಿ ಸಮುದಾಯದ ಪಂಚಾಯಿತಿಯಲ್ಲಿ ಮಹಿಳೆಯರೆ ಭಾಗವಹಿಸುವಿಕೆ ಇರುವುದಿಲ್ಲ. ಪಂಚರಿಗೆ ಸಮುದಾಯದಲ್ಲಿ ಒಳ್ಳೆಯ ಸ್ಥಾನವಿರುವುದು. ಅವರನ್ನು ಗೌರವ ದೃಷ್ಟಿಯಿಂದ ಕಾಣಲಾಗುವುದು. ಪಂಚರು ನೀಡಿದ ತೀರ್ಪಿಗೆ ಎಲ್ಲರು ಒಪ್ಪಿಕೊಳ್ಳುವರು. ಸಮುದಾಯದ ತೀರ್ಪೆ ಅಂತಿಮ ವಾಗಿರುವುದು.

ಇಂದಿನ ವೈಜ್ಞಾನಿಕ ಯುಗದಲೂ ಕೂಡಾ ಯಾವುದೇ ಕಲಾಹಕ್ಕೆ ಒಳಗಾಗಿದ್ದರೂ ಕೂಡಾ ಕಾನೂನು ಕೋರ್ಟ ಅಂತಾ ಅಲೆದಾಡುವುದು ಗಣನೀಯ. ವಿವಾಹ ವಿಚ್ಚೇದನಕ್ಕೆ ಸಂಬಂಧಿಸಿದ್ದಾಗಲಿ, ಅನೈತಿಕ ಸಂಬಂದ್ದ ಮುಂತಾದ ವಿಷಯಗಳಿಗೆ ಪಂಚಾಯಿತಿಗೆ ಮೋರೆ ಹೋಗುತ್ತಾರೆ ಹೊರತು, ಕಾನೂನಿಗಲ್ಲ. ಇಂದಿಗೂ ಕೂಡಾ ಈ ಸಮುದಾಯದ ಪ್ರತಿಯೊಂದು ವಿಷಯವನ್ನು ಪಂಚರಿಂದಲ್ಲೆ ಬಗೆಹರಿಸಲ್ಪಡವುದು. ಪಂಚರು ಪಂಚಾಯಿತಿ ಕಟ್ಟೆಯನ್ನು ಸೇರುವ ಮೊದಲು ದೇವರನ್ನು ಪೊಜಿಸಿ ಬರುವರು. ದೇವ ಶಕ್ತಿಯ ಮೇಲೆ ಅಪಾರವಾದ ನಂಬಿಕೆಯನ್ನು ಹೊಂದಿದ ಇವರು ಪಂಚಾಯಿತಿಯಲ್ಲಿ ಸತ್ಯದ ಕಡೆಗೆ ನಿರ್ಣಯವಾಗಲಿ ಎಂಬುದು ಇದರ ಆಶಯ. ಅಯಾ ಸಮುದಾಯದ ಪ್ರತಿಯೊಬ್ಬ ವ್ಯಕ್ತಿಯು ಪಂಚಾಯಿತಿಗೆ ತುಂಬಾ ಗೌರವವನ್ನು ನೀಡುತ್ತಿದ್ದು ಪಂಚಾಯಿತಿಯ ಶಿಕ್ಷೆಗೆ ಒಳಗಾಗುವುದೇಂದರೆ ಒಂದು ಅವಮಾನಿತ ಕಾರ್ಯ ಎಂತಲ್ಲೇ ಭಾವಿಸುತ್ತಾರೆ.

ಜಗತ್ತಿನಾದ್ಯಂತ ಕಂಡುಬರುವ ಪ್ರತಿಯೊಂದು ಬುಡಕಟ್ಟು ಸಮುದಾಯಗಳಲ್ಲಿ ತಮ್ಮದೆ ಅದಂತ ಪ್ರತ್ಯೇಕವಾದ ನ್ಯಾಯ ಪದ್ದತಿಯನ್ನು ಹೊಂದಿರುವುದು. ಪ್ರತಿಯೊಬ್ಬ ಸಮುದಾಯದಲಿ ವಿಭಿನ್ನ ರೀತಿಯ ಅಪರಾಧಕ್ಕೆ ಭಿನ್ನವಾದ ಶಿಕ್ಷೆಯ ಸ್ವರೂಪವನ್ನು ಕಾಣಬಹುದು. ಹೀಗೆ ಹರಿಣ ಶಿಕರಿ ಸಮುದಾಯದಲ್ಲಿಯೂ ಕೂಡಾ ಶಿಕ್ಷೆಯ ವಿಭಿನ್ನವಾದ ನೆಲೆಯನ್ನು ಕಾಣಬಹುದು.

ಹರಿಣಶಿಕಾರಿ ಸಮುದಾಯದಲ್ಲಿ ಮಹಿಳಾಪಂಚಾರು ಕಂಡುಬರುವುದಿಲ್ಲ. ಮೊದಲಿನಿಂದ ಪುರುಷರೇ ಪಂಚಾರಾಗಿರುವರು ಪಂಚಯಿತಿಯುಲ್ಲಿ ವಾದ–ವಿವಾದ ನಡೆಯುತ್ತಿರುವ ಸಂದರ್ಭದಲ್ಲಿಯೂ ಕೂಡಾ ಮಹಿಳೆಯು ಯಾವುದೇ ಮಾತುಗಳನ್ನಾಡಲು ಅವಕಾಶವನ್ನು ನೀಡುವುದಿಲ್ಲ. ಹಿರಿಯರು ಮತ್ತು ಪುರುಷರ ಮುಂದೆ ಮಹಿಳೆಯರು ಮಾತನಾಡಿದರೆ ಅದನ್ನು

ಅಗೌರವ ಸೂಚಿಯಾಗಿ ಕಾಣಲಾಗುವುದು ಮತ್ತು ಆ ಮಹಿಳೆ ಯಾವುದೇ ಒಂದು ದೊಡ್ಡ ತಪ್ಪು ಮಾಡಿದ್ದಾರೆಂದು ಪರಿಭವಿಸುವುದಂಟು. ಮಹಿಳೆಯರಿಗೆ ಮಾತನಾಡಲು ಯಾವುದೇ ಸ್ವತಂತ್ರ್ಯ ವಿಲ್ಲ. ಒಂದು ಚಿಕ್ಕ ವಯಸ್ಸಿನ ಗಂಡು ಹುಡುಗನಿಗೆ ಪಂಚಾಯಿತಿಯಲ್ಲಿ ಮಾತನಾಡಲು ಅವಕಾಶವಿರುವುದು ಆದರೆ ಮಹಿಳೆರಯರಿಗೆ ಆ ಸ್ಥಾನವನ್ನು ನೀಡದೇ ಇರುವುದನ್ನು ಕಾಣಬಹುದು ಅದರೆ ಪುರುಷ ಪ್ರಧಾನತೆ ಮಹಿಳೆಯರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಅದುಮಿಡಲು ಧಾರ್ಮಿಕ ನೆಲೆಯನ್ನು ಒಂದು ಅಸ್ತ್ರವಾಗಿ ಉಪಯೋಗಿಸಿಕೊಂಡಿದ್ದಾರೆ. ಪ್ರತಿಯೊಂದು ಸಣ್ಣ ಸಣ್ಣ ವಿಷಯದಲ್ಲೂ ತಾರತಮ್ಯ ಕಂಡುಬರುವುದು.

## ಪಂಚಾಯತಿಯ ಮೂಲಕ ನೀಡುವ ಶಿಕ್ಷೆ ಮತ್ತು ಅಪರಾಧಗಳು

ಹರಿಣಶಿಕಾರಿ ಸಮುದಾಯದಲ್ಲಿ ಹಿರಿಯರು ನೀಡಿದ ಆಜ್ಞೆಯ ಮೇರೆಗೆ ಎಲ್ಲವನ್ನು ಪರಿಪಾಲಿಸಿಕೊಂಡು ಹೋಗುತ್ತಿದ್ದರು. ಹಿರಿಯರು ಹೇಳಿಕೊಟ್ಟ ಪ್ರತಿಯೊಂದು ವಿಷಯಗಳನ್ನುನಿಟ್ಟುಕೊಂಡು ನ್ಯಾಯ ದೊರಕಿಸಿಕೊಡುವ ಪದ್ದತಿಯನೇ ಮುಂದುವರೆಸಿಕೊಂಡು ಬಂದಿದ್ದಾರೆ. ಅವರು ಕೊಟ್ಟ ನ್ಯಾಯ ದಂಡನೆ, ಶಿಕ್ಷೆಗೆ, ಪರಿಕ್ಷೆಗೆ ಗುರಿಯಾಗುವುದು ಮತ್ತು ಆದರ ಸ್ವಭಾವದಿಂದಲ್ಲೇ ಸ್ವೀಕರಿಸುವ ಒಂದು ಮನೋಪ್ರವೃತ್ತಿ ಸಮುದಾಯದ ಜನರಲ್ಲಿ ಕಂಡುಬರುವುದು. ಪಂಚರು ಕೊಟ್ಟ ನ್ಯಾಯವೇ ಅಂತಿಮವಾಗಿರುವುದು. ಎಲ್ಲಾ ವರ್ಗದ ಜನರಲ್ಲೂ ಕೂಡಾ ಒಂದೇ ರೀತಿಯ ಶಿಕ್ಷೆಗೆ ಒಳಗಾಗುವರು. ಒಂದೇ ರೀತಿಯ ಸಮಾನವಾದ ನ್ಯಾಯವನ್ನು ದೊರಕಿಸಿಕೊಡುವುದನ್ನು ಕಾಣಬಹುದು. ಹರಿಣ ಶಿಕಾರಿ ಸಮುದಾಯದಲ್ಲಿ ಕಂಡುಬರುವ ಪ್ರಮುಖ ಕಲಹಗಳು ಮತ್ತು ದಂಡನೆಗಳೆಂದರೆ –

ವಿವಾಹಕ್ಕೆ ಸಂಬಂಧಿಸಿದಂತೆ, ಈ ಸಮುದಾಯದಲ್ಲಿ ವರದಕ್ಷಿಣೆಯ ಪರ್ಯಾಯವಾಗಿ ತೆರು ನೀಡುವ ಪದ್ದತಿಯಿರುವುದು. ಅಲ್ಲದೇ ಮದುವೆಯ ಪ್ರತಿಯೊಂದು ಖರ್ಚು ಗಂಡಿನ ಮನೆಯವರೆ ಹೊರಬೇಕಾದ ಪದ್ದತಿಯಿರುವುದು. ಇಂಥ ಸಂದರ್ಭದಲ್ಲಿ ಯಾರಾದರು ಹೆಣ್ಣಿನ ಮನೆಯವರ ಕಡೆಯಿಂದ ಕದ್ದು ಮುಚ್ಚಿ ವರದಕ್ಷಿಣೆ ಪಡೆದಿದ್ದರೆ ಅವರು ಪಂಚಾಯಿತಿಯಲ್ಲಿ ಶಿಕ್ಷೆಗೆ ಗುರಿಯಾಗುತ್ತಾರೆ. ಪಂಚಾನಿಗೆ ಇದರ ಮಾಹಿತಿ ದೊರೆತಾಗ ಗಂಡಿನ ಮನೆಯವರನ್ನು ಕರೆಯಿಸಿ ಪಂಚಾಯಿತಿಯ ಮುಂದೆ ೫೧ ರೂ ದಂಡಾವಾಗಿ ಭರಿಸಲು ಹೇಳುತ್ತಾರೆ. ಇದೇ ಪಂಚಾಯಿತಿಯಲ್ಲಿ ದಂಡ ಕಟ್ಟಿಸಿಕೊಳ್ಳುವುದೇಂದರೆ ಒಂದು ದೊಡ್ಡ ಅವಮಾನದ ಸಂಗತಿಯಾಗಿರುವುದು.

ವಿವಾಹ ವಿಚ್ಛೇದನಕ್ಕೆ ಸಂಬಂಧಿಸಿದಂತೆ, ಹರಿಣ ಶಿಕಾರಿ ಸಮುದಾಯದ ಹಿರಯರು ಕಾನೂನಿಗೆ ಮೊರೆ ಹೋಗದೇ ಪಂಚಾಯಿತಿಯ ಮೂಲಕವೇ ಗಂಡು–ಹೆಣ್ಣು ವಿಚ್ಛೇದನವನ್ನು ಪಡೆದುಕೊಳ್ಳುತ್ತಾರೆ. ವಿಚ್ಛೇದನಕ್ಕೆ ಬಂದ ಗಂಡು–ಹೆಣ್ಣಿನ ಸಂಪೂರ್ಣವಾದ ಕಲಹದ ವಿವರವನ್ನು ಪಡೆದುಕೊಂಡು

ನಂತರ ಅವರಿಬ್ಬರನ್ನು ಮತ್ತೆ ಕೂಡಿಸಲು ಪ್ರಯತ್ನಿಸುತ್ತಾರೆ ಸಂಬಂಧವನ್ನು ಒಪ್ಪಿಗೆಯ ಹಂತದವರೆಗೂ ಮುಂದುವರೆಯದಿದರೇ ವಿಚ್ಚೇದನೆಯನ್ನು ಕೊಡುತ್ತಾರೆ. ಈ ವಿಚ್ಚೇದನೆಯನ್ನು ಪಂಚರು ನೀಡುವಾಗ ಒಂದು ಕಟ್ಟಿಗೆಯನ್ನು ಎರಡು ತುಂಡುಗಳಾಗಿ ವಿಭಾಗಿಸಿ ಅವುಗಳನ್ನು ವಿರುದ್ದ ದಿಕ್ಕಿನಲ್ಲಿ ಎಸೆಯುವುದರ ಸಾಂಕೇತಿಕ ರೂಪವಾಗಿ ವಿಚ್ಚೇದನೆ ದೊರೆಯಿತು ಎಂದರ್ಥ

ಮಹಿಳೆ ತನ್ನ ಗಂಡನ ಹಿಂಸೆಯನ್ನು ತಾಳಲಾರದೇ ಹಿಂಸೆಯನ್ನು ಅನುಭವಿಸಿ ವಿಚ್ಚೇದನೆ ಘಟಕ್ಕೆ ಬಂದಾಗ ಮಹಿಳೆಗೆ ಮತ್ತೆ ಗಂಡನ ಜೊತೆ ಕೂಡಿ ಬಾಳುವಂತೆ ಹಿರಿಯರು ಸಲಹೆ ನೀಡುದರು. ಆದರೆ ಅದಕ್ಕೆ ಹೆಣ್ಣಿನ ಮನೆಯವರು ಒಪ್ಪದಿದ್ದರೆ ಹೆಣ್ಣಿನ ಮನೆಯವರು ಭರಿಸಬೇಕೆಂದು ತೀರ್ಪು ನೀಡುವರು, ಇಂಥ ಒಂದು ರಾಜಕೀಯ ಬಲೆಯಲ್ಲಿ ಸಿಲುಕಿದ ಮಹಿಳೆ ತನ್ನಗೆ ಎಷ್ಟೇ ಕಷ್ಟವಾದರೂ ಗಂಡನ ವಿರುದ್ದ ಮಾತಾನಾಡದೇ ತನ್ನ ದುಖಃವನ್ನೆಲ್ಲಾ ಅದಮಿಡುತ್ತಾಳೆ. ಮಹಿಳೆಯರನ್ನು ಪುರುಷ ಕೇಂದ್ರಿತ ಮೌಲ್ಯಗಳು ನಿಯಂತ್ರಣದಲ್ಲಿರಿಸುದರಲ್ಲಿ ಇದೊಂದು ಉತ್ತಮ ನಿದರ್ಶನವಂತಲ್ಲೇ ಹೇಳಬಹುದು. ಒಂದು ವೇಳೆ ಗಂಡ ಹೆಂಡತಿಯ ಜೊತೆ ಕೂಡಿ ಬಾಳಲು ಸಲಹೆ ನೀಡಿದರೆ ಇರುವುದನ್ನು ಕಾಣಬಹುದು. ಇಂಥ ಸಂದರ್ಭಗಳು ತುಂಬಾ ಕಡಿಮೆಯಂತಲ್ಲೇ ಹೇಳಬಹುದು. ಏಕೆಂದರೆ ಧಾರ್ಮಿಕ ಕಟ್ಟು ಪಾಡುಗಳ ಸಂಕೋಲೆಯಿಂದ ಹೊರಬಂದು ಪುರಷನ ವಿರುದ್ದ ದ್ವನಿ ಎತ್ತುವ ಮಹಿಳೆ ತುಂಬಾ ಕಡಿಮೆ ಇದ್ದಾರೆ. ಇದಕ್ಕೆ ಸಮುದಾಯದ ಸಾಮಾಜಿಕ ಸಂರಚನೆಯೇ ಕಾರಣ ಸಾಮಾಜಿಕ ಸಂರಚನಯು ಸಹಜವಾಗಿಯೇ ಪುರುಷನಿಂದಲೇ ರೂಪಿತವಾಗಿರುವುದರಿಂದ ಮಹಿಳೆಯು ಶೋಷಣೆ, ದಬ್ಬಾಳಿಕೆಗೆ ಒಳಗಾಗುವಳು.

ಅನೈತಿಕ ವ್ಯವಹಾರಿಕ್ಕೆ ಸಂಬಂಧಿಸಿದಂತೆ, ಹೆಂಗಸರು ಹಾದರ ಮಾಡಿದರೆ ಅವಳ ಪ್ರಸವದ ಸಂದರ್ಭದಲ್ಲಿ ತುಂಬಾ ಕಷ್ಟ ನೋವು ಅನುಭವಿಸಿದರೆ, ಸಹಜ ಹೇರಿಗೆಆಗದಿದ್ದರೇ ಆ ಮಹಿಳೆಯು ಅನೈತಿಕ ಸಂಬಂಧವನ್ನು ಹೊಂದಿದ್ದಾಳೆಂದು ನಂಬಲಾಗುವುದು. ಮತ್ತು ಅಂಥವರು ತಮ್ಮ ತಪ್ಪನ್ನು ಒಪ್ಪಿಕೊಂಡು ದೈವದ ಹೆಸರಿನಲ್ಲಿ ದಂಡವನ್ನು ಕಟ್ಟಬೇಕು. ವಿಹೆಣ್ಣಿನ ಹಾದರಕ್ಕೆ ಗಂಡನ ಮನೆಯವರ ಅಭಿಪ್ರಯದಂತೆ ನಡೆದುಕೊಳ್ಳುವರಲ್ಲದೆ, ಈ ಹಿಂದೆ ಹಾದರ ಮೂಡಿದ ಹೆಣ್ಣಿನ ಕಿವಿ, ಮೂಗು ಕೊಯ್ಯುವುದು ಮೂರನೇ, ಬಾರಿ ಪುನಃ ಹಾದರಕ್ಕಿಳಿದರೆ ಜೀವಂತವಾಗಿ ದಫನ್ ಮಾಡುತ್ತಿದ್ದರೆಂದು ತಿಳಿದುಬಂದಿದೆ".[೧೧] ಹೆಣ್ಣು ಅನೈತಿಕ ಸಂಬಂಧವನ್ನು ಹೊಂದಿದ್ದರೇ ಸಮುದಾಯದಿಲ್ಲಿ ಆ ಹೆಣ್ಣನ್ನು ಕೀಳಾಗಿ ಕಾಣುತ್ತಾರೆ. ಅನೈತಿಕ ಸಂಬಂಧವನ್ನು ಹೊಂದುವುದು ಕುಲಕ್ಕೆ ಅವಮಾನ ಎಂದು ನಂಬುತ್ತಾರೆ.

ಹುಟ್ಟಿದ ಮಗು ಯಾವುದಾದರು ರೋಗ-ರುಜಿನಗಳಿಗೆ ತುತ್ತಾದರೆ ಅದಕ್ಕು ತಂದೆ ಅಥವಾ ತಾಯಿ ಯಾರಾದರೂ ಅನೈತಿಕ ಸಂಬಂಧವನ್ನು ಹೊಂದಿದ್ದಾರೆಂತಲೇ ನಂಬಲಾಗುವುದು ಮತ್ತು ಅನೈತಿಕ ಸಂಬಂಧವನ್ನು ಹೊಂದಿದ ಗಂಡು ಮತ್ತು ಹೆಣ್ಣಿನ ವಿಷಯ ಸಮಾಜಕ್ಕೆ ತಿಳಿದಾಗ

ಪಂಚಾಯಿತಿಯಲ್ಲಿ ಅದರ ಬಗ್ಗೆ ನಿರ್ಧಾರ ಕೈಗೊಳ್ಳುವರು ಹೆಣ್ಣು ಮತ್ತು ಗಂಡು ಇಬ್ಬರು ಒಂದೇ ಜಾತಿಗೆ ಸೇರಿದ ಬೇರೆ ಬೇರೆ ಬೆಡಗಿನವರಾಗಿದ್ದರೆ, ಮದುವೆ ಸಂಬಂಧ ಏರ್ಪಡುತ್ತಿದ್ದರೆ, ಹಿರಿಯರ ಒಪ್ಪಿಗೆಯ ಮೇರೆಗೆ ಮದುವೆ ಮಾಡಿಸುವರು ಇಲ್ಲದಿದ್ದರೆ ಗೋತ್ರ ಕೂಡದಿದ್ದರೆ ದಂಡವನ್ನು ಕಟ್ಟಿಸಿಕೊಂಡು ಇಬ್ಬರನ್ನು ತಮ್ಮ ತಮ್ಮ ಮನೆಗೆ ಕಳಿಸುವರು.

ಹರಿಣಶಿಕಾರಿ ಸಮುದಾಯದಲ್ಲಿ ಪುರುಷನೇ ಪ್ರಮುಖ ವ್ಯಕ್ತಿಯಾಗಿದ್ದು, ಮಹಿಳೆಯನ್ನು ದ್ವಿತಿಯ ಪ್ರಜೆಯನ್ನಾಗಿ ಕಾಣುತ್ತಾರೆ ಧಾರ್ಮಿಕ ಆಚರಣೆಗಳು ಮಹಿಳೆಯರ ಮೇಲಿನ ಮಡಿ ಮೈಲಿಗೆನಂತಹ ಸೂತಕಗಳ ಮೂಲಕ ನೋಡುವುದರಿಂದ ಅವರನ್ನು ಪುರುಷರಿಗಿಂತ ಕೀಳಾಗಿನೂ ಕಾಣುತ್ತಾರೆ. ಅವರಲ್ಲಿ ಕೆಲವೊಂದು ನಿರ್ಬಂಧನೆಗಳು ಕಂಡುಬರುವವು. ಗಂಡ ಹೆಂಡತಿಯ ಜಗಳದ ಸಂದರ್ಭದಲ್ಲಿ ಗಂಡ ಹೆಂಡತಿಯನ್ನು ಹೊಡೆಯಬಹುದು. ಆದರೆ ಹೆಂಡತಿಯಾದವಳು ಗಂಡನಿಗೆ ತಿರುಗಿ ಹೋಡೆಯುವಂತಿಲ್ಲ. ಅಂಥವರು ದೈವದವರ ಎದುರು ದಂಡವನ್ನು ಕಟ್ಟಬೇಕು. ಆ ದಂಡದ ಪ್ರಮಾಣ ೧೫-೧೦೧ ರೂ ವರೆಗೆ ಇರುವುದು. ವಿಉಟ್ಟು ಬಿಟ್ಟ ಲಂಗವನ್ನು ಗಂಡಸರಿಗೆ ತಾಗುವಂತೆ ಇಟ್ಟರೆ ಅಂಥ ಹೆಂಗಸರಿಗೆ ೧೦೧ರೂ. ವರೆಗೆ ದಂಡ ಹಾಕುತ್ತಾರೆಹಿ.[೨] ಅಂದರೆ ಮಹಿಳೆಯರನ್ನು ಎಷ್ಟರ ಮಟ್ಟಿಗೆ ಮೈಲಿಗೆ ಎಂದು ತಿಳಿದ್ದಾರೆಂದರೆ ಅವರ ಬಟ್ಟೆ ಕೂಡ ಮೈಗೆ ಸೋಕಬಾರದು ಪುರುಷ ಪ್ರಧಾನತೆಯು ಮಡಿ ಮೈಲಿಗೆಯಂತಹ ಆಚರಣೆಗಳನ್ನು ಮಹಿಳೆಯರಿಗೆ ಮೀಸಲಿರಿಸುವುದರ ಮೂಲಕ ಮಹಿಳೆಯನ್ನು ಪ್ರತಿಯೊಂದು ಹಂತದಲ್ಲೂ ಕೀಳು ಎನ್ನುವ ಮನೊವೃತ್ತಿಯನ್ನು ಬೆಳೆಸಿಕೊಂಡುರುವುದನ್ನು ಕಾಣಬಹುದು.

ಇಂಥ ಅನೇಕ ಆಚರಣೆಗಳು ಮಹಿಳೆಯರು ದಂಡ ವಿಧಿಸುವಂತೆ ಮಾಡಿರುವುದು ಅಸಮಂಜಸ ಎನ್ನಿಸಿದರೂ ಕೂಡಾ ನ್ಯಾಯ ನಿಯಮವಳಿಗಳಿಗೆ ಅನುಸಾರವಾಗಿ ಎಲ್ಲರೂ ನಡೆದುಕೊಳ್ಳಬೇಕು ಇಲ್ಲವಾದರೆ ಅವರನ್ನು ಸಮುದಾಯದ ಸಮಾಜದಿಂದ ತೆಗೆದುಹಾಕಲಾಗುವುದು. ಇಂತ ಒಂದು ಕಾರ್ಯನೀತಿಯಿಂದ ಅವರ ಅಸ್ತಿತ್ವಕ್ಕೆಧಕ್ಕೆ ತರುವುದು ಎಂದು ನಂಬಿರುತ್ತಾರೆ ಆದ್ದರಿಂದ ಪಂಚಾಯಿತಿಯಲ್ಲಾ ನಿಯಮಗಳಿಗೆ ಸಮುದಾಯದ ಜನರು ತಾಲೆಭಾಗುವರು.

ಹರಿಣ ಶಿಕಾರಿ ಸಮುದಾಯದಲ್ಲಿ ಪ್ರಮುಖವಾಗಿ ಎರಡು ರೀತಿಯ ಶಿಕ್ಷೆಯ ವಿಧಾನಗಳನ್ನು ನೋಡಬಹುದು. ಒಂದು ಯಾರಾದರೂ ತಪ್ಪು ಮಾಡಿದರೇ, ಅದನ್ನು ಒಪ್ಪಿಕೊಳ್ಳದಿದ್ದರೇ, ಅಂಥವರಿಗಾಗಿ ಒಂದು ಪರಿಕ್ಷೆಯನ್ನು ವಾಡುವರು. ವಾದ ವಾಡುವವರು ಮತ್ತು ಪ್ರತಿವಾದಿಗಳಿಬ್ಬರನ್ನು ಕರೆಮಾಡಿ ದೈವದವರು ಸಮುಖದಲ್ಲಿ ಒಂದು ಮಣ್ಣಿನ ಪಾತ್ರೆಯಲ್ಲಿ ಕಾದ ಬೀಸಿ ಎಣ್ಣೆಯನ್ನು ಒಂದು ಸೂಜಿಯನ್ನು ಎಸೆಯುತ್ತಾರೆ. ವಾದಿ ಮತ್ತು ಪ್ರತಿವಾದಿಗಳಿಬ್ಬರು ಕಾದ ಎಣ್ಣೆಯಲ್ಲಿ ಕೈ ಹಾಕುವುದರ ಮೂಲಕ ಪಾತ್ರೆಯಲ್ಲಿದ್ದ ಸೂಜಿಯನ್ನು ತೆಗೆಯಬೇಕು. ಇಲ್ಲಿ ಗಮನಿಸಬೇಕಾದ ಮುಖ್ಯವಾದ ಸಂಗತಿಯೆನೇಂದರೆ, ಕಾದ ಎಣ್ಣೆಯಲ್ಲಿ ಕೈ ಹಾಕಿದ ವ್ಯಕ್ತಿಗಳ

ಕೈಯು ಸಟ್ಟಿರಬಾರದು ಒಂದು ವೇಳೆ ಸುಟ್ಟಿದ್ದರೆ ಅವರೇ ತಪ್ಪಿಸ್ಥರೆಂದು ನಿರ್ಣಯವಾಗುವುದು. ಒಂದು ವೇಳೆ ಕೈಗೆ ಏನು ಆಗದಿದ್ದರೇ ಎಣ್ಣೆಯಲ್ಲಿ ಕೈಯನ್ನು ಹಾಕಿದ ೩ನೇ ದಿನಕ್ಕೆ ಉಸುಕನ್ನು ಅಥವಾ ಮಣ್ಣನ್ನು ಅದೇ ಕೈ ಯಿಂದ ಕೇಬರಲು ಹಚ್ಚುತ್ತಾರೆ ಅಂತಹ ಸಂದರ್ಭದಲ್ಲಿ ಆ ವ್ಯಕ್ತಿಯ ಕೈ ಚರ್ಮ ಸುಲಿಯುವುದಾಗಲೀ ರಕ್ತ ಬರುವುದಾಗಲೀ ಆದರೆ ಅವನು ತಪ್ಪಿಸ್ಥನೆಂದು ಹೇಳಿ ಆತನಿಂದ ದಂಡವನ್ನು ವಸೂಲಿ ಮಾಡಲಾಗುವುದು.

ಇಂಥ ಪರಿಕ್ಷೆಗಳು ಹೆಚ್ಚಾಗಿ ಮಹಿಳೆಯರ ಮೇಲಿನ ಅನ್ಯೆತಿಕ ಸಂಬಂದದ ವಿಚಾರವಾಗಿ ಹೆಚ್ಚು ಬಳಕೆಗೊಂಡಿರುವುದನ್ನು ಕಾಣಬಹುದು. ಮಹಿಳೆಯರು ತಮ್ಮ ಪವಿತ್ರದ ಸತ್ವ ಪರಿಕ್ಷೆಗಾಗಿ ಕಾದ ಎಣ್ಣೆಯಲ್ಲಿ ಕೈ ಹಾಕಿ ತಾನು ಪವಿತ್ರಳು ಎಂದು ಸಾಬಿತು ಪಡಿಸುಕೊಳ್ಳುವ ಪದ್ದತಿಯನ್ನು ಕಾಣಬಹುದು. ಸನಾತನ ಕಾಲದಿಂದ ಮಹಿಳೆಯರಿಗೆ ಮಾತ್ರ ಪಾವಿತ್ರ್ಯದಂತ ಮಿಥ್ಯೆಗಳನ್ನು ನೀಡುವುದರ ಮೂಲಕ ಅವರ ಲೈಂಗಿಕ ಕ್ರಿಯೆಯಾ ಮೇಲೆ ಒಡಿತ ಹೊಂದಿರುವುದು ಮರಷ ವ್ಯವಸ್ಥೆಯ ಒಂದು ರಾಜಕೀಯ ಸ್ಥಿತಿ ಎಂತಲೇ ಹೇಳಬಹುದು.

ಹರಿಣಶಿಕಾರಿ ಸಮುದಾಯದಲ್ಲಿನ್ನೊಂದು ವಿಧದ ಶಿಕ್ಷೆಯ ಪರಿಕ್ಷೆಯೆಂದರೆ, ವಾದಿ ಮತ್ತು ಪ್ರತಿವಾದಿಗಳು ಪಂಚಾಯಿತಿಗೆ ಶುಲ್ಕವನ್ನು ಕಟ್ಟುವರು ದೈವದ ಹೆಸರಿನ ಮೇಲೆ ಪಂಚರ ಅನ್ನ, ನೀರು ಸ್ವೀಕರಿಸದೇ ನ್ಯಾಯ ಪರಿಕ್ಷೆಗೆ ಬಂದಿರುವರು. ವಾದಿ ಮತ್ತು ಪ್ರತಿವಾದಿ ಪಂಚರು, ಸಮುದಾಯದ ಜನರು ಎಲ್ಲರು ಸೇರಿ ಕೆರೆ, ಹಳ್ಳ, ಅಥವಾ ಬಾವಿಗೆ ಬರುವರು ಪಂಚರು ಮುಂಚೆ ಎಲ್ಲಾ ನಿಯಮಾವಳಿಗಳನ್ನು ಹೇಳುವರು. ವಾದಿ ಅಥವಾ ಪ್ರತಿವಾದಿಯ ಬಗ್ಗೆ ಒಬ್ಬ ಬಲಿಷ್ಟವಾದ ವ್ಯಕ್ತಿಯನ್ನು ಆಯ್ಕೆ ಮಾಡಿಕೊಂಡಿರಬೇಕು. ಒಬ್ಬ ವ್ಯಕ್ತಿಯನ್ನು ನೀರಿನಲ್ಲಿ ಮುಳುಗುವಂತೆ ಆದೇಶ ನೀಡಿ ಕೈ ಯಲ್ಲಿ ಒಂದು ಬಿದಿರನ್ನು ಕೊಡವರು. ಒಬ್ಬರು ಬಾವಿಯ ಮೇಲ್ಬಾಗದಲ್ಲಿರುವ ಪಂಚರು ಒಂದು ಕವಡಿಯನ್ನು ತೆಗೆದುಕೊಂಡು ಏಷ್ಟು ದೂರ ಆಗುತ್ತೊ ಅಷ್ಟು ದೂರ ಕವಡಿಯನ್ನು ಎಸೆಯುವನು ಬಾವಿಯ ಮೇಲಿದ್ದ ವ್ಯಕ್ತಿ ಆ ಕವಡಿಯನ್ನು ತರಲು ಓಡಲು ಪ್ರಾರಂಭಿಸಿದ ತಕ್ಷಣ ಬಾವಿಯ ನೀರಿನಲ್ಲಿ ವ್ಯಕ್ತಿ ಮುಳಗಬೇಕು ಅವನ್ನು ಆ ಕವಡಿಯನ್ನು ತರುವವರೆಗೂ ಬಾವಿಯಲ್ಲಿದ್ದ ವ್ಯಕ್ತಿ ಹಾಗೆಯೇ ಮುಳುಗಿರಬೇಕು ಒಂದು ವೇಳೆ ಆತ ನೀರಿನಿಂದ ಹೊರಬಂದರೆ ಪಕ್ಷವಹಿಸಿಕೊಂಡು ವ್ಯಕ್ತಿ ಸೋತಂತೆ ಆಗುವದು. ವ್ಯಕ್ತಿಯಿಂದ ದಂಡವನ್ನು ಕಟ್ಟಿಸಿಕೊಳ್ಳುವರು ಆಚರಣೆಯಲ್ಲಿ ಮಹಿಳೆಯರು ಕಂಡುಬರುವದಿಲ್ಲ. ಆದರೆ ಮಹಿಳೆಯರ ಪರವಾಗಿ ಬೇರೆ ಪುರುಷರು ಪರಿಕ್ಷೆಯನ್ನು ಕೈಗೊಳ್ಳುವರು. ಸಮೂದಾಯದ ನ್ಯಾಯ ವ್ಯವಸ್ಥೆಯಲ್ಲಿ ಮಹಿಳೆಯರು ಭಾಗವಹಿಸಿದರೂ ಕೂಡಾ, ಮಾತನಾಡುವ ಅವಕಾಶವನ್ನು ನೀಡಿಲ್ಲ ಮಡಿ ಮೈಲಿಗೆಯ ಆಧಾರದ ಮೇಲೆ ಜೈವಿಕತನದ ಆಧಾರದ ಮೇಲೆ ಅನೇಕ ರೀತಿಯ ದಂಡವನ್ನು ಭರಿಸಿಕೊಳ್ಳುವುದನ್ನು ಕಾಣಬಹುದು. ಸಂವಿಧಾನದ ಹಂತದಿಂದ ಒಂದು ಬುಡಕಟ್ಟು ಸಮುದಾಯದ ಪಂಚಾಯಿತಿಯ ರಾಜಕೀಯ ವ್ಯವಸ್ಥೆಯವರೆಗೂ ಮಹಿಳೆಯರು

ಶೋಷಣೆಗೆ, ದಬ್ಬಾಳಿಕೆಗೆ ಒಳಗಾಗಿರುವುದು ಕಂಡುಬರುವುದು. ರಾಜಕೀಯ ವಲಯದ ಮಹಿಳೆಯರ ಪ್ರವೇಶ ಒಂದು ಸಂದರ್ಭಕ್ಕೆ ಸನ್ನಿವೇಶಕ್ಕೆ ಮಾತ್ರ ಎಂಥಲ್ಲೇ ಬಿಂಬಿಸಲಾಗಿದೆ.

## ಅಡಿ ಟಿಪ್ಪಣಿ

೧. ವಿಜಯ ಶ್ರೀ ಸಬರದ್ : ಮಹಿಳೆ ಶೋಷಣೆ ಸವಾಲುಗಳು : ಪು. ೧೦೨
೨. ಶ್ರೀ ಮತಿ ಎಚ್. ಎಸ್. : ಮಹಿಳಾ ಅಧ್ಯಾಯನದ ಸಂಚಿಕೆ : ಪು. ೮೩
೩. ಹೇಮಲತಾ ಹೆಚ್ ಎಮ್. : ಮಹಿಳಾ ಅಧ್ಯಾಯನ ೨ : ಪು. ೯೩
೪. ಗಾಯತ್ರೀ ನಾವಡ್ : ಮಹಿಳಾ ಸಂಕಥನ : ಪು. ೫೭
೫. ಅದೇ ಪು. ೬
೬. ಹೇಮಲತಾ ಹೆಚ್ ಎಮ್. : ಮಹಿಳಾ ಅಧ್ಯಾಯನ ೩ : ಪು. ೬೯
೭. ಗಾಯತ್ರೀ ನಾವಡ್ : ಮಹಿಳಾ ಸಂಕಥನ : ಪು. ೫೪
೮. ಶ್ರೀ ಮತಿ ಎಚ್. ಎಮ್. ಮಹಿಳಾ ಅದ್ಯಾಯನದ ಸಂಚಿಕೆ : ೮೫
೯. ಜಯಲಕ್ಷ್ಮಿ ಕೆ. : ಹೆಣ್ಣು ಅಸ್ತಿತ್ವದ ಹೋರಾಟದಲ್ಲಿ : ಪು. ೪೦
೧೦. ಲಕ್ಕಿ ಪೃಥ್ವಿರಾಜ್ ಮತ್ತು ಶಿಕಾರಿ ರಾಮು ಹೆಚ್. ಪಿ : ಪಾರ್ಥಿ : ಪು. ೬೫
೧೧. ಪ್ರಹ್ಲಾದ್ ಬೆಟಗೇರಿ : ಅಡವಿಚೆಂಚರ ಸಂಸ್ಕೃತಿ : ಪು. ೫೦
೧೨. ಲಕ್ಕಿ ಪೃಥ್ವಿರಾಜ್ ಮತ್ತು ಶಿಕಾರಿ ರಾಮು ಹೆಚ್. ಪಿ : ಪಾರ್ಥಿ : ಪು. ೩೫

ಅಧ್ಯಾಯ - ೬

# ಹರಿಣಶಿಕಾರಿ ಸಮೂದಾಯ ಮತ್ತು ಸರಕಾರದ ಅಭಿವೃದ್ಧಿ ಯೋಜನೆಗಳು

೬.೧ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳಿಗೆ ಸಂವಿಧಾನಿಕ ರಕ್ಷಣೆಗಳು

೬.೨ ಸರಕಾರದ ಯೋಜನೆ ಮತ್ತು ಹರಿಣಶಿಕಾರಿ ಸಮುದಾಯ

ಒಂದು  ದೇಶದ ಅಭಿವೃದ್ಧಿ ಮಟ್ಟವನ್ನು ಆಯಾ ದೇಶದ ರಾಷ್ಟ್ರೀಯ ವರಮಾನದ ಆಧಾರದ ಮೇಲೆ ಸೂಚಿಸಲಾಗುವುದು. ಆಗ ದೇಶದ ಆರ್ಥಿಕ ಮಟ್ಟವನ್ನು ಕೇವಲ ಸಂಘಟಿತ ವಲಯಕ್ಕೆ ಮಾತ್ರ ಸೀಮಿತಗೊಳಿಸಲಾಗುವುದು. ಆದರೆ ಅತ್ಯಧಿಕ ಮಹಿಳೆಯರ ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದು, ರಾಷ್ಟ್ರದ ಆರ್ಥಿಕ ಕೊಡುಗೆಯಲ್ಲಿ ಅದರ ಭಾಗವಹಿಸುವಿಕೆಯನ್ನು ಗೌಣ್ಯಗೊಳಿಸಲಾಗುವುದು. “ಒಂದು ರಾಷ್ಟ್ರದ ಅಭಿವೃದಿಯಾಗಬೇಕಾದರೆ ಜನಸಂಖ್ಯೆಯು ಅರ್ಧದಷ್ಟಿರುವ ಮಹಿಳೆಯರು ಅಭಿವೃದ್ದಿಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಬೇಕು. ಅವರ ಭಾಗವಹಿಸುವಿಕೆ ಕಡಿಮೆಯಿದೆ, ಅದರೆ ಅಭಿವೃದ್ದಿಯನ್ನು ಸಾಧಿಸಿಲ್ಲವೆಂದೇ ಅರ್ಥ”[1] ಅದ್ದರಿಂದ ಮಹಿಳೆಯರು ಸ್ವಶಕ್ತಿಕರಣಗೊಳ್ಳಲು ಒಂದು ಆರ್ಥಿಕ ಸವಲತ್ತನ್ನು ಪಡೆಯಲು ಸರಕಾರ ಮಹಿಳಾ ಅಭಿವೃದ್ದಿಗೋಸ್ಕರ ಅನೇಕ ಮಹಿಳಾ ನಿರ್ದಿಷ್ಟ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ಮುಖ್ಯವಾಗಿರುವುದು.

ಭಾರತದ್ಯಾಂತ ಅನೇಕ ಬುಡಕಟ್ಟು ಸಮೂದಾಯಗಳ ನೆಲೆಗಳನ್ನು ಕಾಣಬಹುದು. ಇಂತಹ ಬುಡಕಟ್ಟು ಸಮೂದಾಯಗಳು ದುರ್ಗಮ ಪ್ರದೇಶ, ಕಾಡು, ನದಿ, ಕಣಿವೆ ಪ್ರದೇಶಗಳಲಲ್ಲಿ ವಾಸಿಸುತ್ತಿರುವರು. ಇತ್ತಿಚಿನ ನಗರೀಕರಣದ ಪ್ರಭಾವಕ್ಕೆ ಒಳಗಾದ ಕೆಲವೊಂದು ಬುಡಕಟ್ಟು ಸಮೂದಾಯಗಳು ನಗರ ಪ್ರದೇಶಕ್ಕೆ ಹತ್ತಿರವಾಗಿದೆ. ಇನ್ನೂ ಕೇಲವು ಸಮೂದಾಯಗಳು ನಗರ ಪ್ರದೇಶದ ಒಂದು ಮೂಲೆಯಲ್ಲೆ ವಾಸವಾಗಿದ್ದರೂ, ಕೂಡಾ ತಮ್ಮದೇ ಆದ ವಿಶೇಷ ಸಂಸ್ಕೃತಿಯನ್ನು ಕಾಪಾಡಿಕೊಂಡು ಸಮಾಜದ ಮುಖ್ಯವಾಹಿನಿಯಿಂದ ದೂರವೇ ಉಳಿದಿವೆ. ಈ ಸಮೂದಾಯಗಳನ್ನು ಅನುಲಕ್ಷಿಸಿದಾಗ ಇವು ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿಯೇ ಹಿಂದುಳಿದಿರುವುದನ್ನು ಕಾಣಬಹುದು. ಅಲ್ಲದೇ ತಮ್ಮದೇ ಆದಂತ ಸಾಂಪ್ರದಾಯಿಕ ಕಟ್ಟುಪಾಡುಗಳ ನೆರಳಲ್ಲೆ ಜೀವನ ಸಾಗಿಸುತ್ತಿರುವರು. ಇಂದಿನ ವೈಜ್ಞಾನಿಕ ಯುಗದಲ್ಲೂ ಕೂಡಾ ಇಂತಹ ಸಮೂದಾಯಗಳಲೂ ತಮ್ಮ ಆರ್ಥಿಕ ಹೊಣೆಯನ್ನು ನೀಗಿಸಲು ಬೇಟೆಯಾಡುವುದನ್ನು ಮತ್ತು ತಮ್ಮ ಸಂಪ್ರದಾಯಿಕ ಕುಲ ಕಸುಬುಗಳನ್ನು ಆಧಾರಾವಾಗಿಟ್ಟುಕೊಂಡಿರುವುದು ಅದು ಜೀವನದ ನಿರ್ವಹಣೆಗೆ ಸಾಲದೇ ಇರುವುದು ಮುಖ್ಯವಾಗಿರುವುದು. ಇಂದಿಗೂ ಕೂಡಾ ಅನೇಕ ಸಮೂದಾಯಗಳಲೂ ಅಲೆಮಾರಿ ಜೀವನ ಸಾಗಿಸುತ್ತಿದ್ದು ಅದು ಕೇವಲ ಕುಟುಂಬದ ಹೊಣೆಗಾಗಿ, ಹೊಟ್ಟೆ ಪಾಡಿಗಾಗಿ, ನಿರ್ಧಿಷ್ಟವಾದ ಒಂದು ಪ್ರದೇಶದಲ್ಲಿ ನಲೆನಿಂತಿರುವ ಅನೇಕ ಸಮೂದಾಯಗಳಲೂ ಉದ್ಯೋಗದ ಸ್ವರೂಪವನ್ನು ನೋಡಿದಾಗ ಅಲ್ಲಿ ವಿಭಿನ್ನವಾದ ಉದ್ಯೋಗವನ್ನು ಅರಿಸಿಕೊಂಡುರುವುದನ್ನು ನೋಡಬಹುದು. ಆದರೂ ಕೂಡಾ ದೇಶದ ಅಭಿವೃದ್ದಿಯ ಮಟ್ಟವನ್ನು ನೋಡಿದಾಗ ಅನೇಕ ಬುಡಕಟ್ಟು

ಸಮೂದಾಯಗಳು ಅಭಿವೃದ್ದಿಯ ಹಂತದ ಕೆಳಮಟ್ಟದಲ್ಲಿರುವುದು ಕಂಡುಬರುವುದು. ಅನೇಕ ಬುಡಕಟ್ಟು ಸಮೂದಾಯದ ಕುಟುಂಬಗಳಲ್ಲಿ ಬಡತನದ ಸಂಖ್ಯೆ ಕಡಿಮೆಯಿರುವುದನ್ನು ಕಾಣಬಹುದು. ಇಂತಹ ಬುಡಕಟ್ಟು ಸಮೂದಾಯಗಳ ಅಭಿವೃದ್ದಿಗೋಸ್ಕರ ಸರಕಾರವು ಅನೇಕ ಕ್ರಮಗಳನ್ನು ಕೈಗೊಂಡಿರುವುದು.

"ಒಂದು ಬುಡಕಟ್ಟನ್ನು ಸಾಮಾನ್ಯವಾಗಿ ನಿರ್ಧಿಷ್ಟ ಆಡುಭಾಷೆ, ಏಕರೀತಿಯ ಸಾಂಸ್ಕೃತಿಕ ಹಿನ್ನಲೆ, ಒಂದುಗೂಡಿದ ಸಾಮಾಜಿಕ ಸಂಘಟನೆಯನ್ನು ಹೊಂದಿ, ಒಂದು ನಿರ್ಧಿಷ್ಟ ನೆಲೆಯೊಳಗೆ ವಾಸಿಸುವ ಒಂದು ಸಾಮಾಜಿಕ ಸಮೂಹ ಎಂದು ವ್ಯಾಖ್ಯಾಯಿಸಲಾಗಿದೆ. ಬುಡಕಟ್ಟು ಜನರನ್ನು ಬೆಟ್ಟ ಗುಡ್ಡಗಳಲ್ಲಿ, ಕಾಡುಗಳಲ್ಲಿ ವಾಸಿಸುವ ಅರೆ-ನಾಗರಿಕ ಜನರೆಂದು ಅಥವಾ ವಿಶೇಷ ತರಹದ ಕೃಷಿ ಜನರು ಎಂದು ಪರಿಗಣಿಸಲಾಗಿದೆ."[೨] ಸಮಾಜ ಶಾಸ್ತ್ರದಲ್ಲಿ ಬುಡ್ಡಕಟ್ಟು ಎಂಬ ಪದದ ಅರ್ಥವನ್ನು ಹೀಗೆ ವಿಶೇಷವಾಗಿ ಅರ್ಥೈಸಲಾಗಿದೆ. ಇಂತಹ ವಿಶೇಷತೆಯನ್ನು ಹೊಂದಿದ ಅನೇಕ ಬುಡಕಟ್ಟು ಸಮೂದಾಯಗಳಲ್ಲಿ ಹರಣಶಿಕಾರಿ ಸಮೂದಾಯವು ಒಂದಾಗಿದೆ. ಸಮೂದಾಯದ ಅಭಿವೃದ್ದಿಗಾಗಿ ಅನೇಕ ಓಉಔ ಗಳು, ಸ್ವಯಂ ಸೇವಾ ಸಂಸ್ಥೆಗಳು ಅನೇಕ ಕಾರ್ಯನೀತಿಗಳನ್ನು ಹಮ್ಮಿಕೊಂಡಿರುವುದು. ಅಲ್ಲದೆ ಹರಣಶಿಕಾರಿ ಸಮೂದಾಯವು ಅನೇಕ ಅಭಿವೃದ್ದಿಯ ಹಂತಗಳನ್ನು ತಲುಪಲು ಅನೇಕ ಪ್ರಯತ್ನಗಳನ್ನು ಮಾಡಿದವು.

ಭಾರತ ಸರಕಾರವು ಕಾನೂನು ಮತ್ತು ನ್ಯಾಯಾಧಿಕರಣ ಮಂತ್ರಾಲಯವು ಭಾರತ ಸರಕಾರದ ವಿಶೇಷ ಪತ್ರಿಕೆಯಲ್ಲಿ ದಿನಾಂಕ ೦೮-೦೧-೩೦೦೯ ರಂದು ಪ್ರಕಟಿಸಲಾದ ಪರಿಶಿಷ್ಠ ಜಾತಿಗಳು ಮತ್ತು ಪರಿಶಿಷ್ಠ ಬುಡಕಟ್ಟು ಆದೇಶಗಳು ಅಧಿನಿಯಮ ೨೦೦೨, ದಿನಾಂಕ ೦೮-೦೧-೨೦೦೩ ರ ಅನ್ವಯ ಹರಣಶಿಕಾರಿ ಸಮೂದಾಯವನ್ನು ಪರಿಶಿಷ್ಟ ಬುಡಕಟ್ಟು ಪಟ್ಟಿಗೆ ಸೇರಿಸಲಾಯಿತು.

ಪರಿಶಿಷ್ಠ ಬುಡಕಟ್ಟು ಪ್ರಧಾನವಾಗಿ ಒಂದು ಆಡಳೀತತ್ಮಾಕ ಹಾಗೂ ಸಂವಿಧಾನಿಕ ಪರಿಕಲ್ಪನೆ ಭಾರತ ಸಂವಿಧಾನದ ೩೪೨ನೇಯ ವಿಧಿಯ ಅಡಿಯಲ್ಲಿ ಪಟ್ಟಿ ಮಾಡಿದಂತ ಒಂದು ಬುಡಕಟ್ಟು ಸಮೂದಾಯವನ್ನು ಇದು ಸೂಚಿಸುತ್ತದೆ. ಸಂವಿಧಾನದ ೩೪೨ನೇಯ ವಿಧಿಯ ಪ್ರಕಾರ" ಆಯಾ ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಕ್ಕೆ ಅನ್ವಯವಾಗುವಂತಹ ಹಾಗೂ ಅದು ಒಂದು ರಾಜ್ಯವಾಗಿದಲ್ಲಿ ಅಲ್ಲಿನ ರಾಜ್ಯಪಾಲರೊಂದಿಗೆ ಸಮಾಲೋಚನೆಯ ನಂತರ, ಸಂವಿಧಾನದ ಉದ್ದೇಶಗಳಿಗೋಸ್ಕರ ಪರಿಶಿಷ್ಠ ಬುಡಕಟ್ಟುಗಳು ಎಂದು ಪರಿಗಣಿಸಲಾಗುದಾರ ಬುಡಕಟ್ಟುಗಳು ಅಥವಾ ಬುಡಕಟ್ಟು ಸಮೂಧಾಯಗಳ ಭಾಗಗಳು ಅಥವಾ ಒಳಗಿನ ಸಮುದಾಯಗಳನ್ನು ಒಂದು ಸಾರ್ವಜನಿಕ ಆದೇಶದ ಮೂಲಕ ಅಧ್ಯಕ್ಷರು ಸ್ಪಷ್ಟಪಡಿಸಬಹುದು" ಇಂತಹ ಒಂದು ಕ್ರಿಯೆಗೆ ಅಧಿನಿಯಮಕ್ಕೆ ಒಳಗಾದ ಹರಣಶಿಕಾರಿ ಸಮೂದಾಯವು ಪರಿಶಿಷ್ಠ ಪಂಗಡಕ್ಕೆ ಸೇರ್ಪಡೆಯಾಗಿದ್ದರೂ

ಕೂಡಾ ಅದರಿಂದ ದೊರೆಯುವ ಅನೇಕ ಸೌಲಭ್ಯವನ್ನು ಪಡೆಯುವಲ್ಲಿ ವಿಫಲತೆಯನ್ನು ಹೊಂದಿದೆ. ನಗರ ಪ್ರದೇಶದಲ್ಲೇ ವಾಸಿಸುವ ಈ ಜನರು ಸಮಾಜದ ಮುಖ್ಯವಾಹಿನಿಂದ ದೂರವೇ ಇದ್ದಾರೆ. "ಬ್ರಿಟಿಷರ ಆಳ್ವಿವಿಕೆಯ ಅವಧಿಯಲ್ಲಿ ತಮ್ಮ ಹಿತಕ್ಕಾಗಿ ಅನುಸರಿಸಿದ ಅವರ ಅನೇಕ ನೀತಿಗಳಿಂದಾಗಿ, ಬುಡಕಟ್ಟು ಜನರು ಪ್ರತ್ಯೇಕವಾಗಿ ಉಳಿಯುಬೇಕಾದುದ್ದಲ್ಲದೆ ಪ್ರತ್ಯೇಕ ಭಾವನೆಯನ್ನು ಬೆಳೆಸಿಕೊಳಲಾಯಿತು. ಕೆಲವು ಕಾಯಿದೆಗಳಿಂದಾಗಿ ಬುಡಕಟ್ಟು ಜನರನ್ನು ಅಪರಾಧಿಗಳು, ಡಕಾಯಿತರು, ಕಳ್ಳರು, ದರೋಡಿಕೋರರು; ಸಮಾಜ ವಿರೋಧಿಗಳು ಎಂದು ಕರೆಯುವಂತಾಯಿತು,"[೩] ಇಂತಹ ಪಟ್ಟವನ್ನು ಹೊಂದಿದ ಹರಣಶಿಕಾರಿ ಸಮೂದಾಯವು ಕೂಡಾ ಸಮಾಜದ ಮುಖ್ಯಾವಾಹಿನಿಯಿಂದ ದೂರವೇ ಉಳಿದಿದೆ. ಸ್ವತಂತ್ರ್ಯ ಪೂರ್ವದ ಅವಧಿಯನ್ನು ಗಮನಿಸಿದಾಗ ಈ ಸಮೂದಾಯಗಳ ಸ್ಥಿತಿಗತಿಯು ಇಲ್ಲಿನ ಪರಿಸ್ಥಿತಿಗಿಂತ ಸ್ವಲ್ಪ ಮುಟ್ಟಿಗೆ ಅಭಿವೃದ್ಧಿ ಹೊಂದಿರುವುದನ್ನು ಕಾಣಬಹುದು. ಪರಿಶಿಷ್ಠ ಬುಡಕಟ್ಟುಗಳ ಅಭಿವೃದ್ದಿಗಾಗಿ ಸರಕಾರವು ಅನೇಕ ಯೋಜನೆಗಳನ್ನು ಹಮ್ಮಿಕೊಳ್ಳುವುದರ ಮೂಲಕ ಬುಡಕಟ್ಟು ಸಮೂದಾಯದ ಹಿತಾಸಕ್ತಿಗಾಗಿ ಕಾರ್ಯ ಚಟುವಟಿಕೆಗಳನ್ನು ಕೈಗೋಳುತ್ತಾ ಬಂದಿರುವುದು.

ಪರಿಶಿಷ್ಠರ ಸುಧಾರಣೆಗಾಗಿ ಅನೇಕ ಸಮಾಜ ಸುಧಾರಕರು, ಚಳುವಳಿಗಾರರು ಹೋರಾಡಿದ್ದನ್ನು ಕಾಣಬಹುದು. ಇವರಲ್ಲಿ ಮುಖ್ಯವಾಗಿ ಮಹಾತ್ಮಗಾಂಧಿ ಎ.ಎ.ತಕ್ಕರ್, ಡಾ. ಬಿ.ಆರ್. ಅಂಬೇಡ್ಕರ್‌ರವರು ಮುಖ್ಯರಾಗಿದ್ದಾರೆ. ಇವರ ರಾಷ್ಟ್ರವ್ಯಾಪ್ತಿ ಪರಿಶಿಷ್ಠ ಬುಡಕಟ್ಟುಗಳ ಸುಧಾರಣೆಗಾಗಿ ಹೋರಾಡಿದರು. ಇಂತಹ ಚಳುವಳಿಗಳು ಒಟ್ಟಿನಲ್ಲಿ ಈ ಅನುಕರಣೆಯ ಪ್ರತಿಯೊಂದು ಸಾಮಾಜಿಕ ಸುಧಾರಣೆ ಮತ್ತು ಮತಾಂತರ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಠ ಬುಡಕಟ್ಟುಗಳು ತಮ್ಮ ಸಮಸ್ಯೆಗಳ ಬಗ್ಗೆ ಚಿಂತಿತರಾಗಲು ಜಾಗತಿಗೊಳ್ಳಲು ಸಹಾಯಕಾರಿಯಾದವು ಪ್ರಜಾಸತಾತ್ಮಕ ವ್ಯವಸ್ಥೆಯಲ್ಲಿ ಹಕ್ಕುಗಳಿಗಾಗಿ ಶ್ರಮಿಸಲು ಪ್ರಯತ್ನಿಸಿದವು ಹೀಗೆ ಪರಿಶಿಷ್ಠ ಜಾತಿ ಮತ್ತು ಪಂಗಡಗಳು ಸಮಾಜದಲ್ಲಿ ಬಂದು ಭದ್ರರವಾದ ಬುನಾದಿಯನ್ನು ಹಾಕಿಕೊಳ್ಳುವುದರ ಮೂಲಕ ತಮ್ಮ ಹಕ್ಕುಗಳನ್ನು ಪಡೆಯವಲ್ಲಿ ಯಶಸ್ವಿಯಾದರು.

## ಪರಿಶಿಷ್ಠ ಜಾತಿಗಳು ಮತ್ತು ಪರಿಶಿಷ್ಠ ಬುಡಕಟ್ಟುಗಳಿಗೆ ಸಂವಿಧಾನಿಕ ಸಂರಕ್ಷಣೆಗಳು

ಪರಿಶಿಷ್ಠ ಜಾತಿಗಳು, ಪರಿಶಿಷ್ಠ ಬುಡಕಟ್ಟುಗಳು ಮತ್ತು ಇತರ ದುರ್ಬಲ ವರ್ಗದ ಜನರಿಗೆ ಭದ್ರತೆ ಮತ್ತು ಸಂರಕ್ಷಣೆಗಳನ್ನು ಒದಗಿಸಲು ಸಂವಿಧಾನವು ಸೂಚಿಸುತ್ತದೆ. ಈ ಜನರ ಶೈಕ್ಷಣಿಕ ಮತು ಆರ್ಥಿಕ ಹಿತವನ್ನು ಉತ್ತಮಗೊಳಿಸುವ ಮತ್ತು ಸಾಮಾಜಿಕ ಮೌಲ್ಯಗಳನ್ನು ನಿವಾರಿಸುವ ಉದ್ದೇಶದಿಂದ ಇವರಿಗಾಗಿ ವಿಶೇಷ ಕ್ರಮಗಳನ್ನು ಕೈಗೊಳ್ಳಲು ಸೂಚಿಸುತ್ತದೆ. ಸಂವಿಧಾನದಲ್ಲಿ ಒದಗಿಸಿರುವ ಪ್ರಮುಖ ಸಂರಕ್ಷಣಕ್ರಮಗಳು ಹೀಗಿವೆ.

೧. ವಿಧಿ ೧೭ ರ ಪ್ರಕಾರ

ಅಸ್ಪೃಶ್ಯತೆಯ ನಿವಾರಣೆ ಮತ್ತು ಯಾವುದೇ ! ರೀತಿಯಲ್ಲಿ ಅದರ ಆಚರಣೆಯ ನಿಷೇಧ

೨. ವಿಧಿ ೪೬ – ಅವರ ಶಿಕ್ಷಣ ಮತ್ತು ಆರ್ಥಿಕ ಹಿತವನ್ನು ಪ್ರೋತ್ಸಾಹಿಸುವುದು ಮತ್ತು ಸಾಮಾಜಿಕ ಅನ್ಯಾಯ ಹಾಗೂ ಎಲ್ಲ ತರಹದ ಶೋಷಣೆಗಳಿಂದ ರಕ್ಷಣೆ.

೩. ವಿಧಿ ೨೫(ಬಿ) – ಸಾರ್ವಜನಿಕರಿಗೆ ಇರುವ ಹಿಂದೂ ಧಾರ್ಮಿಕ ಸಂಸ್ಥೆಗಳನ್ನು, ಹಿಂದುಳಿದ ಎಲ್ಲ ವರ್ಗಗಳ ಮತ್ತು ವಿಭಾಗಗಳ ಜನರಿಗೆ, ಕಾನೂನಿನ ಮೂಲಕ ತೆರೆದಿಡುವುದು.

೪. ವಿಧಿ ೧೫(೨)  ಅಂಗಡಿಗಳು ಸಾರ್ವಜನಿಕ ಫಲಹಾರ ಮಂದಿರಗಳು, ಹೋಟೇಲ್‌ಗಳು ಮತ್ತು ಸಾರ್ವಜನಿಕ ಮನರಂಜನಾ ಪ್ರದೇಶಗಳಿಗೆ ಪ್ರದೇಶಕ್ಕೆ, ಅಥವಾ ಭಾಗದ ಅಥವಾ ಪೂರ್ಣವಾಗಿ ಸಮಾಜದ ಹಣದಿಂದ ನಿರ್ವಹಿಸಲ್ಪಡುತ್ತಿರುವ ಅಥವಾ ಸಾರ್ವಜನಿಕರ ಉಪಯೋಗಕ್ಕೇಂದೆ ಮೀಸಲಿಡುವ ಭಾವಿಗಳು, ಕೆರೆಗಳು, ಸ್ನಾನ ಘಟ್ಟಗಳು, ರಸ್ತೆಗಳು, ಮತ್ತು ಸರ್ವಜನಿಕ ವಿಹಾರ ಪ್ರದೇಶಗಳ ಬಳಕೆಗೆ ಇದ್ದಿರಬಹುದಾದ ಯಾವುದೇ ಕೊರತೆಯನ್ನು ಹೊಣೆಗಾರಿಕೆಯನ್ನು ನಿರ್ಬಂಧಗಳನ್ನು ಅಥವಾ ಷರತ್ತುಗಳನ್ನು ತಡೆದು ಹಾಕುವುದು.

೫. ವಿಧಿ ೧೯(೫) ಯಾವುದೇ ಪರಿಶಿಷ್ಠ ಬುಡಕಟ್ಟುಗಳ ಹಿತದ ದೃಷ್ಟಿಯಿಂದ ಎಲ್ಲಾ ನಾಗರಿಕರ ಸಮಾನ್ಯತರ ಹಕ್ಕುಗಳಾದ ಸ್ವತಂತ್ರ್ಯವಾಗಿ ಒಡಾಡಿಕೊಂಡುವ ಒಂದೇಡೆ ನಲೆಸುವ ಮತ್ತು ಆಸ್ತಿಯನ್ನುಗಳಿಸುವ ಹಕ್ಕುಗಳನ್ನು ಕಾನೂನಿನ ಮೂಲಕ ಮೊಟಕುಗೊಳಿಸುವುದು.

೬. ವಿಧಿ ೨೯ (೨) ಸರಕಾರದಿಂದ ನಿರ್ವಹಿಸಲ್ಪಡುತ್ತಿರುವ ಅಥವಾ ಸರಕಾರದ ಬೊಕ್ಕಸದಿಂದ ಸಹಾಯಾನುದಾನವನ್ನು, ಪಡೆಯುತ್ತಿರುವ ಶಿಕ್ಷಣಾ ಸಂಸ್ಥೆಗಳಿಗೆ ಯಾವುದೇ ಪ್ರದೇಶ ನಿರಾಕರಣೆಯನ್ನು ತೆಡೆಗಟ್ಟುವುದು.

೭. ವಿಧಿ ೧೬ ಮತ್ತು ೩೩೫ ಅಸಮರ್ಪಕ ಪ್ರಾತಿನಿದ್ಯಾಗಳಿದ್ದಲ್ಲಿ ಸಾರ್ವಜನಿಕ ಸೇವೆಗಳಲ್ಲಿ ಹಿಂದುಳಿದ ವರ್ಗಗಳಿಗೆ ಮೀಸಲಾತಿ ಸೌಲಭ್ಯವನ್ನು ಒದಗಿಸಲು ಸರಕಾರಕ್ಕೆ ಅವಕಾಶವನ್ನು ಒದಗಿಸುವುದು ಮತ್ತು ಸಾರ್ವಜನಿಕ ಸೇವೆಗಳ ಹುದ್ದೆಗಳಿಗೆ ಪರಿಶಿಷ್ಠ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳ ಪ್ರತಿನಿತ್ಯದ ಬೇಡಿಕೆಗಳನ್ನು ಸರಕಾರವು ಪರಿಗಣಿಸುವುದು.

೮. ವಿಧಿ ೩೩೦ ಮತ್ತು ೩೩೨ ಲೋಕಸಭೆ ಮತ್ತು ರಾಜ್ಯ ವಿಧಾನ ಸಭೆಗಳಲ್ಲಿ ಪರಿಶಿಷ್ಠ ಜಾತಿಗಳು ಮತ್ತು ಪರಿಶಿಷ್ಠ ಬುಡಕಟ್ಟುಗಳಿಗೆ ೨೫ ಜನವರಿ ೨೦೧೦ ವರೆಗೆ ವಿಶೇಷ ಪ್ರಾತಿನಿದ್ಯ..

೯. ವಿಧಿ ೧೬೪ ಮತ್ತು ೩೩೮ ಮತ್ತು ೫ನೇಯ ಷಡ್ಯುಲ್ – ಬುಡಕಟ್ಟುಗಳ ಜನರ ಕಲ್ಯಾಣವನ್ನು ಸಾಧಿಸಲು ಮತ್ತು ಅವರ ಹಿತವನ್ನು ಕಾಪಾಡಲು ರಾಜ್ಯಗಳಲ್ಲಿ ಬುಡಕಟ್ಟು ಸಲಹಾ ಕಾನ್ಸಿತಗಳನ್ನು ಮತ್ತು ಪ್ರತೇಕ ಇಲಾಖೆಗಳನ್ನು ಸ್ಥಾಪಿಸುವುದು ಮತ್ತು ಕೇಂದ್ರದಲ್ಲಿ ರಾಷ್ಟ್ರೀಯ ಕಮೀಷನನ್ನು ಸ್ಥಾಪಿಸುವುದು.

೧೦. ವಿಧಿ ೨೪೪ ಮತತು ೫೪೬ನೇಯ ಷೆಡ್ಯುಲ್ – ಷೆಡ್ಯುಲ್ ಮತ್ತು ಬುಡಕಟ್ಟು ಪ್ರದೇಶಗಳ ಆಡಳಿತ ಮತ್ತು ನಿಯಮತ್ರಾಣಕ್ಕೆ ವಿಶೇಷಕ್ರಮಗಳು.

೧೧. ವಿಧಿ ೨೪೩ ಡಿ – ಪಂಚಾಯಿತಿಗಳು ಮತ್ತು ಮುನ್ಸಿಪಾಲಿಟಗಳಲ್ಲಿ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟುಗಳಿಗೆ ಪ್ರಾತಿನಿಧ್ಯ.

ಹೀಗೆ ಅನೇಕ ಸಂವಿಧಾನಾತ್ಮಕ ಹಕ್ಕುಗಳನ್ನು ನೀಡುವುದರ ಮೂಲಕ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಬುಡಕಟ್ಟು ಪಂಗಡಗಳ ಅಭಿವೃದ್ಧಿಗಾಗಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳತ್ತಿರುವುದು ಅವುಗಳಲ್ಲಿ ಮುಖ್ಯಾವಾದವುಗಳೆಂದರೆ

೧. ಕೃಷಿ ಇಲಾಖೆಯಿಂದ ಪರಿಶಿಷ್ಟ ಪಂಗಡದವರಿಗೆ ಕೃಷಿ ಉಪಕರಣಗಳು, ಜಲಂತರ್ಘ ಪಂಪಸೇಟ್ ವ್ಯವಸ್ಥೆ, ಬೀಜ ಪುರೈಕೆ ಮತ್ತು ಧನ ಸಹಾಯ ಒದಗಿಸಲಾಗುವುದು.

೨. ಭೂಸಾರ ಮತ್ತು ಜಲ ಸಂರಕ್ಷಣೆ ವ್ಯವಸ್ಥೆಯ ಬಗ್ಗೆ ತಿಳಿಸಿ ಕೋಡುವ ಮತ್ತು ಸೌಲಭ್ಯವನ್ನು ಒದಗಿಲಾಗುವುದು.

೩. ಗ್ರಾಮೀಣ ಪ್ರದೇಶದ ಬುಡಕಟ್ಟು ಕುಟುಂಬಗಳಿಗೆ ತೋಟಗಾರಿಕೆ ಮಾಡಲು ಸೌಲಭ್ಯವನ್ನು ಒದಗಿಸುವುದು ಪ್ರತಿ ಬುಡಕಟ್ಟು ಮನೆಗೆ ೭ ತೆಂಗಿನ ಸಸಿಗಳನ್ನು ಉಚಿತವಾಗಿ ಪೂರೈಸುಲಗುವುದು. ತಂತುರು ನೀರಾವರಿ ಸೌಲಭ್ಯಕ್ಕಾಗಿ ಶೇ ೯೦% ಸಹಯಧನವನ್ನು ನೀಡಲಾಗುವುದು.

೪. ಮೀನುಗಾರಿಕೆ ಮಾಡಲು ಅನೇಕ ಸಹಾಯವನ್ನು ಮಾಡಲಾಗುವುದು. ಈ ಇಲಾಖೆವತಿಯಿಂದ ಮೀನುಗಾರಿಕೆಯ ಬಗ್ಗೆ ತರಬೇತಿ ನೀಡುವುದರ ಜೊತೆಗೆ ರೂ. ೨,೦೦,೦೦ ಗಳ ವೆಚ್ಚದಲ್ಲಿ ಮೀನುಗಾರಿಕೆಗೆ ಬೇಕಾಗುವ ಉಪಕರಣಗಳನ್ನು ಉಚಿತವಾಗಿ ವಿತರಿಸಲಾಗುವುದು. ಅಲ್ಲದೇ ಕೆರೆಗಳಲ್ಲಿ ಮೀನುಗಾರಿಕೆ ಮಾಡಲು ಬೇಕಾಗುವ ಸಹಾಯಧನ ಕೊಳದಲ್ಲಿ ಮೀನುಮರಿ ಸಾಗಾಣಿಕೆಗೆ ಸಹಯಧನ, ಮೀನುಗಾರ ಮಹಿಳೆಯರಿಗೆ ಆರ್ಥಿಕ ನೆರವು ಇತ್ಯಾದಿ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.

೫. ಪಶು ಸಂಗೋಪನೆಗೆ ಬೇಕಾಗುವ ಸಹಾಯಧನ ಪಶು ಸಂಗೋಪನೆ ಘಟಕಗಳ ಸ್ಥಾಪನೆ. ಒಟ್ಟಾರೆ ಯಾವುದೇ ಒಬ್ಬ ಫಲಾನುಭವಿಗೆ ರೂ ೧೦,೦೦೦.೦೦ ಕ್ಕಿಂತಲೂ ಹೆಚ್ಚಿನ ಸಹಾಯಧನ ದೊರೆಯುವುದಿಲ್ಲ.

೬. ಅರಣ್ಯ ಇಲಾಖೆಯಿಂದ ನೆಡುತೋಪು ನಡುವುದು. ಅರಣ್ಯಗಳು ದೊರೆಯುವ ಬೆತ್ತ ಬಿದಿರನ್ನು ಉಚಿತವಾಗಿ ವಿತರಣೆ ಮಡಲಾಗುವುದು. ಜೇನುಕೃಷಿ ಕೈಗೊಳ್ಳುವಂತಹ ಬುಡಕ್ಕು ಫಲಾನುಭವಿಗಳಿಗೆ ರೂ ೩೫೦ ರ ದರದಲ್ಲಿ ೫ ಜೇನು ಪೆಟ್ಟಿಗೆಗಳನ್ನು ಉಚಿತವಾಗಿ ನೀಡಿ ಜೇನು ಕೃಷಿಗೆ ಪ್ರೋತ್ಸಾಹ ನೀಡಲಾಗುತ್ತಿದೆ.

೭. ಗ್ರಾಮೀಣ ಮತ್ತು ಸಣ್ಣ ಕೈಗಾರಿಕೆಗಳಲ್ಲಿ ಆಸಕ್ತಿ ಇರುವ ಬುಡಕಟ್ಟು ನಿರುದ್ಯೋಗಿ ಯುವಕ – ಯುವತಿಯರಿಗೆ ಗ್ರಾಮೀಣ ಮತ್ತು ಸಣ್ಣ ಕೈಗಾರಿಕೆ ಇಲಾಖೆ ವತಿಯಿಂದ ಜೇನು ಕೃಷಿ, ಬಡಗಿತನ,ಮತ್ತು ಬಿದಿರು, ಬೆತ್ತದ ವೃತ್ತಿಗಲ್ಲಿ ಶಿಷ್ಟ ವೇತನದೊಂದಿಗೆ ತರಬೇತಿ ನೀಡಲಾಗುತ್ತಿದೆ. ತರಬೇತಿಯ ನಂತರ ರೂ. ೨೦೦೦ ಬೆಲೆ ಬಾಳುವ ವಿದ್ಯುತ್ ರಿಪೇರಿ ಮಾಡುವ ಸಾಧನ ಸಲಕರಣೆಗಳು, ಕಲ್ಲು ಒಡೆಯುವ ಉಪಕರಣಗಳು, ಸೈಕಲ್ ರೀಪೇರಿ, ಹೊಲಿಗೆ ಯಂತ್ರ ಗಾರೆ ಕೆಲಸದ ಉಪಕರಣಗಳು, ಕಮ್ಮರಿಕೆ ಇನ್ನಿತರೆ ಉಪಕರಣಗಳನ್ನು ಉಚಿತವಾಗಿ ನೀಡಿ ಸ್ವತಂತ್ರವಾಗಿ ವೃತ್ತಿ ಕೈಗೊಳ್ಳಲು ನೆರವು ನೀಡಲಾಗುತ್ತಿದೆ.

೮. ರೇಷ್ಮೆ ಕೃಷಿಗೆ ಬೇಕಾಗುವ ವಿವಿಧ ಸವಲತ್ತುಗಳನ್ನು ನೀಡಲಾಗುತ್ತದೆ. ರೇಷ್ಮೆ ಹುಳು ಸಾಕಾಣಿಗೆ ಉಪಕರಣಗಳ ಸರಬರಾಜು ಮತ್ತು ಐ. ಪಿ, ಸೆಟಗಳ ಸರಬರಾಜ್ ಮುಂತಾದವುಗಳಿಗೆ ಸಹಾಯಧನ ನೀಡಲಾಗುತ್ತಿದೆ.

೯. ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮದ ವತಿಯಿಂದ ಬುಡಕಟ್ಟು ವರ್ಗದ ಕಾಲೋನಿಗಳಿಗೆ ವಿದ್ಯುತ್ ಕರಣಗೊಳಿಸುವಲ್ಲಿ ೪೦,೦೦೦,೦೦ ವೆಚ್ಚದಲ್ಲಿ ಕಾರ್ಯಕ್ರಮವನ್ನು ಜಾರಿಗೊಳಿಸಲಾಗಿದೆ.

೧೦. ಉದ್ಯೋಗ ಮತ್ತು ತರಬೇತಿ ಇಲಾಖೆಯ ವತಿಯಿಂದ ಬುಡಕಟ್ಟಿನವರಿಗೆ ಬಡಗಿತನ, ಟೇಲರಿಂಗ್ ಇತರೆ ವೃತ್ತಿಗಳಲ್ಲಿ ತರಬೇತಿ ನೀಡಲಾಗುತ್ತದೆ. ತರಬೇತಿ ಅವಧಿಯಲ್ಲಿ ಪ್ರತಿ ಅಭಿವೃದ್ದಿಗೆ ಮಾಹೆಯಾನ ರೂ ೫೦೦ ರಂತೆ ಒಂದು ವರ್ಷ ಶಿಷ್ಯವೇತನವನ್ನು ನೀಡುವುದರ ಜೊತೆಗೆ ರೂ ೧೦೦.೦೦ ರಂತೆ ಪ್ರೋತ್ಸಾಹ ಹಣವನ್ನು ಪ್ರತಿ ಅಭ್ಯರ್ಥಿಯ ಪೋಷಕರಿಗೆ ಮತ್ತು ತರಬೇತಿಯಲ್ಲಿ ಯಶಸ್ವಿಯಾದ ಅಭ್ಯರ್ಥಿಗೆ ಟಾಲ್‌ಕಿಟ್, ಹೊಲಿಗೆ ಯಂತ್ರ ಮತ್ತು ಕಚ್ಚಾ ಸಾಮಾಗ್ರಿಗಳನ್ನು ಉಚಿತವಾಗಿ ನೀಡಲಾಗುತ್ತದೆ.

೧೧. ಮಹಿಳೆ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆಯಿಂದ ಈ ಕೆಳಕಂಡ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಗಳು ೨ ವಲಯಗಳಲ್ಲಿ ಹಂಚಿಹೋಗಿವೆ ಅವು –

ಅ) ರಾಜ್ಯ ವಲಯ ಯೋಜನೆಗಳು

ಆ) ಜಿಲ್ಲಾ ವಲಯ ಯೋಜನೆಗಳು

**ಅ) ರಾಜ್ಯ ವಲಯ ಯೋಜನೆಗಳು**

೧) **ಸ್ತ್ರೀ ಶಕ್ತಿ :** ಕೇಂದ್ರ ಸರಕಾರದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದರ ಜೊತೆಗೆ ರಾಜ್ಯ ಸರಕಾರಗಳು ತಮ್ಮದೇ ಆದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತವೆ. ಸರಕಾರೇತರ

ಹಾಗೂ ಮಹಿಳಾ ಸಮಸ್ಯೆ ಅಳವಡಿಸಿಕೊಂಡ ಸ್ವ ಸಹಾಯ ಗುಂಪು ಕಾರ್ಯತಂತ್ರದ ಯಶಸ್ವಿನಿಂದ ಪ್ರೇರಣೆಗೊಂಡ ಕರ್ನಾಟಕ ರಾಜ್ಯ ಸರಕಾರವು ಅದೇ ಮಾದರಿಯಲ್ಲಿ ಸ್ತ್ರೀ ಶಕ್ತಿ ಎಂಬ ಕಾರ್ಯಕ್ರಮವನ್ನು ೨೦೦೮ ರಲ್ಲಿ ಪ್ರಾರಂಭಿಸಿತು. ಮೊದಲೆರಡು ವರ್ಷಗಳಲ್ಲೇ ಸುಮಾರು ೨೦ ಲಕ್ಷ ಮಹಿಳೆಯರು ಸ್ವ ಸಹಾಯ ಗುಂಪುಗಳನ್ನು ರಚಿಸಿಕೊಂಡು ಸುಮಾರು ೧೦೦ ಕೋಟಿ ರೂಪಾಯಿಯನ್ನು ಉಳಿತಾಯ ಮಾಡಿರುವುದು ಸರಕಾರದ ಹಾಗೂ ಮಹಿಳೆಯರು ಕ್ರಾಂತಿಕಾರಿಕ ಪ್ರಯತ್ನವೇ ಆಗಿದೆ. ಈ ಉಳಿತಾಯದ ಹಣಕ್ಕೆ ಸರಕಾರ ವತಿಯಿಂದ ರೂ ೭೨ ಕೋಟಿಯನ್ನು ನೀಡಿದೆ.

ಸ್ತ್ರೀ ಶಕ್ತಿ ಯೋಜನೆಯಡಿ ರಚಿಸಲಾಗುವ ಗುಂಪುಗಳಿಗೆ ಯೋಜನೆ ಬಗ್ಗೆ ಮಾಹಿತಿ ನೀಡುವ ತರಬೇತಿಯಲ್ಲಿದ್ದ ಗುಂಪುಗಳಿಗೆ ಪುಸ್ತಕ ನಿರ್ವಹಣೆ ಹಾಗೂ ಸಾಮಾಜಿಕ ವಿಷಯಗಳ ತರಬೇತಿ ನೀಡಲಾಗುವುದು. ಗುಂಪುಗಳು ಆರ್ಥಿಕವಾಗಿ ಸಬಲತೆ ಹೊಂದಲು ಬ್ಯಾಂಕ್ ಸಂಪರ್ಕದೊಂದಿಗೆ ಆದಾಯವನ್ನು ಚಟುವಟಿಕೆಗಳನ್ನು ಹಮ್ಮಿಕೊಳಲು ಅನುವು ಮಾಡುವುದಲ್ಲದೆ ಈ ಬಗ್ಗೆ ಕೌಶಲ್ಯ ತರಬೇತಿಯನ್ನು ಸಹಾ ನೀಡಲಾಗುತ್ತದೆ. ಗುಂಪುಗಳ ಚಟುವಟಿಕೆ ಹಮ್ಮಿಕೊಳ್ಳಲು ಅದರ ಉಳಿತಾಯದಿಂದ ಅಂತರಿಕ ಸಾಲವನ್ನು ನೀಡಲಾಗುತ್ತದೆ. ಗುಂಪುಗಳು ತಯಾರಿಸುವ ವಸ್ತುಗಳಾಗಿ ಸೂಕ್ತ ಮಾರುಕಟ್ಟೆ ಒದಗಿಸಲು ಪ್ರಯತ್ನಿಸಲಾಗುತ್ತದೆ.

ಗುಂಪುಗಳು ಹಮ್ಮಿಕೊಳಬಹುದಾದ ಚಟುವಟಿಕೆಗಳೆಂದರೆ

೧) ಹಸು/ಕೋಳಿ ಸಾಗಾಣಿಕೆ

೨) ಸಿದ್ದ ಉಡುಪು ಮಾರಾಟ

೩) ಕಿರಾಣಿ ಅಂಗಡಿ

೪) ಹಪ್ಪಳ, ಸೊಂಡಿಗೆ, ಉಪ್ಪಿನಕಾಯಿ ತಯಾರಿಕೆ.

೫) ಎರಹುಳು ಗೋಬ್ಬರ ತಯಾರಿಕೆ ಇತ್ಯಾದಿ.

೬) ನೇಯ್ಗೆ

ಹೀಗೆ ಸ್ತ್ರೀ ಶಕ್ತಿ ಗುಂಪುಗಳ ಮೂಲಕ ಮಹಿಳೆಯರಿಗೆ ವಿಶೇಷವಾದ ಆರ್ಥಿಕ ಚಟುವಟಿಕೆಯಲ್ಲಿ ತೊಡಗುವಂತೆ ಮೊದಲಾಗುವುದು. ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡ ಅಭಿವೃದ್ಧಿ ನಿಗಮದ ವತಿಯಿಂದ ಸಾಲ ಸೌಲಭ್ಯ ಪಡೆಯುವುದು.

**೨) ಸಾಂತ್ವನ :** ದೌರ್ಜನ್ಯ ಹಾಗೂ ಅತ್ಯಾಚಾರಕ್ಕೊಳಪಟ್ಟ ಮಹಿಳೆಯರಿಗೆ ಆರ್ಥಿಕ ಸಹಾಯ ಕಾನೂನು ಸಲಹೆ ನೀಡುವುದು, ಆರ್ಥಿಕ ಪರಿಹಾರ, ತಾತ್ಕಾಲಿಕ ಆಶ್ರಯ ಒದಗಿಸುವದು ಹಾಗೂ ಸ್ವ ಉದ್ಯೋಗ ಮಾಡಲು ಅನುಕೂಲವಾಗುವಂತೆ ತರಬೇತಿ ನೀಡಿ ಸ್ವಾವಲಂಬಿಗಳಾಗಿ ಬದುಕುವಂತೆ ಮಾಡುವುದೇ ಈ ಯೋಜನೆಯ ಉದ್ದೇಶ.

**೩) ಗ್ರಾಮಾಂತರ ಪ್ರದೇಶದ ಬಾಲಕಿಯರಿಗೆ ವಸತಿ ನಿಲಯ ನಡೆಸಲು ಆರ್ಥಿಕ ನೆರವು**

ಗ್ರಾಮಾಂತರ ಪ್ರದೇಶದ ಹೆಣ್ಣು ಮಕ್ಕಳು ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸಲು ಹಾಗೂ ತಾವೇ ಬಿಡುವುದನ್ನು ತಪ್ಪಿಸಲು ಅನುಕೂಲವಾಗುವಂತೆ ವಸತಿ ನಿಲಯಗಳನ್ನು ಇಲಾಖೆ ವತಿಯಿಂದ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸಲಾಗುತ್ತದೆ.

**೪) ವೃತ್ತಿ ತರಬೇತಿ ಪಡೆಯುವ ಮಹಿಳೆಯರಿಗೆ ಆರ್ಥಿಕ ಸಹಾಯ**

ಹಿಂದುಳಿದ ಮಹಿಳೆಯರ ಸ್ಥಾನಮಾನ ಹೆಚ್ಚಿಸಿ ಅವರನ್ನು ಆರ್ಥಿಕವಾಗಿ ಸ್ವಾವಲಂಬಿಗಳಾಗಿ ಮಾಡಲು ಮಹಿಳೆಯರಿಗೆ ಅವಶ್ಯವಿರುವ ನೈಪುಣ್ಯತೆ / ಕೌಶಲ್ಯತೆ ಒದಗಿಸಲು ನೆರವಾಗುವಂತೆ ಟಿ.ವಿ. ಮತ್ತು ರೇಡಿಯೋ ಯಂತ್ರ ರಚನೆ, ಗಡಿಯಾರ ರಿಪೇರಿ, ಬೇರಳಚ್ಚು ಮತ್ತು ಶೀಘ್ರಲಿಪಿ ತರಬೇತಿ, ಮೋಟಾರ್ ರಿಪೇರಿಂಗ್ ಇತ್ಯಾದಿಗಳಲ್ಲಿ ತರಬೇತಿ ಪಡೆಯಲು ಆರ್ಥಿಕ ಸಹಾಯ ನೀಡಲಗುವುದು.

**೫) ವಿಧವಾ ವೇತನ** : ಯಾವುದೇ ರೀತಿಯ ಜೀವನಾಧ್ದರವು ಇಲ್ಲದೆ ನಿರ್ಗತಿಕ ವಿಧವೆಯರಿಗೆ ಹಣಕಾಸು ನೆರವು ನೀಡುವ ಮೂಲಕ ಭದ್ರತೆಯನ್ನು ಒದಗಿಸುವುದು.

**೬) ಭಾಗ್ಯಲಕ್ಷ್ಮಿ ಯೋಜನೆ :** ಸಮಾಜದಲ್ಲಿ ಹೆಣ್ಣು ಮಕ್ಕಳ ಸ್ಥಿತಿಯನ್ನು ಉತ್ತಮಗೊಳಿಸಲು ಬಡತನರೇಖೆಗಿಂತ ಕೆಳಗಿರುವ ಕುಟುಂಬವಲಯಗಳಲ್ಲಿ ಹೆಣ್ಣು ಮಗು ಜನಿಸಿದಾಗ ಅಂತಹ ಕುಟುಂಬಗಳಿಗೆ ನೈತಿಕ ಧೈರ್ಯ ತುಂಬಲು ೨೦೦೬-೦೭ ನೇ ಸಾಲಿನಲ್ಲಿ ಭಾಗ್ಯಲಕ್ಷ್ಮಿಯು ಹೊಸ ಯೋಜನೆಯನ್ನು ಜಾರಿಗೆ ತರಲಾಗಿದೆ.

**ಆ) ಜಿಲ್ಲಾ ವಲಯ ಯೋಜನೆಗಳು**

**೧) ಸಮಗ್ರಶಿಶು ಅಭಿವೃದ್ಧಿ ಯೋಜನೆ** : ಈ ಯೋಜನೆಯು ೧೯೭೪ ರಲ್ಲಿ ಪ್ರಾರಂಭವಾಯಿತು ಇಡೀ ದೇಶದಲ್ಲಿ ಅತ್ಯಂತ ಹಿಂದುಳಿದ ಗ್ರಾಮೀಣ, ಬುಡಕಟ್ಟು ಹಾಗೂ ನಗರದ ಕೊಳಚೆ ಪ್ರದೇಶದಲ್ಲಿ ವಾಸಿಸುವ ಲಕ್ಷಾಂತರ ಮಕ್ಕಳು ಮತ್ತು ತಾಯಂದಿರಿಗೆ ಈ ಯೋಜನೆಯು ವರದಾನವಾಗಿ ಬಂದಿತು. ಇದು ಚಿಕ್ಕ ಮಕ್ಕಳು, ಗರ್ಭಿಣಿಯರು, ಹಾಲುಣಿಸುವ ತಾಯಂದಿರು ಹಾಗೂ ಯುವತಿಯರ ಪೌಷ್ಟಿಕತೆ ಮತ್ತು ಅರೋಗ್ಯದ ಗುಣಮಟ್ಟವನ್ನು ಉತ್ತಮ ಪಡಿಸುವ ಗುರಿಯನ್ನು ಹೊಂದಿದೆ. ಈ ಯೋಜನೆಯು ರೋಗ ನಿರೋದಕ ಚುಚುಮದ್ದು, ಪೌಷ್ಟಿಕ ಆಹಾರ, ಆರೋಗ್ಯ ತಪಾಸಣೆ, ಆರೋಗ್ಯಕ್ಕೆ ಕುರಿತು ಶಿಕ್ಷಣ, ಮಕ್ಕಳಿಗೆ ಶಾಲಾ ಪೂರ್ವ ಶಿಕ್ಷಣ ಮುಂತಾದ ಸೇವೆಗಳನ್ನು ನೀಡುತ್ತದೆ.

**೨) ಪೂರಕ ಪೌಷ್ಟಿಕ ಆಹಾರ ಕಾರ್ಯಕ್ರಮ** : ಗ್ರಾಮಾಂತರ ಪ್ರದೇಶದಲ್ಲಿರುವ ಬುಡಕಟ್ಟು ಸಮೂದಾಯಗಳು ವಾಸಿಸುವ ಹತ್ತಿರದಲ್ಲಿಯೇ ಅಂಗನವಾಡಿ ಕೇಂದ್ರಗಳನ್ನು ತೆರೆದು

ಬುಡಕಟ್ಟು ಮಕ್ಕಳಿಗೆ ಶಿಕ್ಷಣ ಮತ್ತು ಆರೋಗ್ಯಕ್ಕೆ ಹೆಚ್ಚಿನ ಪ್ರಾಧನ್ಯತೆ ನೀಡಲಾಗಿದೆ. ಈ ಅಂಗನವಾಡಿ ಕೇಂದ್ರದಲ್ಲಿ ಮಕ್ಕಳಿಗೆ ಅಕ್ಷರ ಆಭ್ಯಾಸದ ಜೊತೆಗೆ ಅವರ ದೇಹ ಬೆಳವಣಿಗೆಗೆ ಬೇಕಾಗುವ ವಿಶೇಷ ಪೌಷ್ಠಿಕ ಆಹಾರವನ್ನು ನೀಡಲಾಗುತ್ತಿದೆ.

**೩) ಶಿಶು ಪಾಲನ ಕೇಂದ್ರಗಳು** : ವ್ಯವಸಾಯ ಹಾಗೂ ಇನ್ನಿತರ ವೃತ್ತಿನಿರತ ಮಹಿಳೆಯರ ೦-೩ ವರ್ಷದ ಮಕ್ಕಳಿಗೆ ಗ್ರಾಮಾಂತರ ಹಾಗೂ ನಗರ ಪ್ರದೇಶಗಳಲ್ಲಿ ಆಶ್ರಯ ನೀಡಲು ಶಿಶುಪಾಲನಾ ಕೇಂದ್ರಗಳನ್ನು ಪ್ರಾರಂಭಿಸಲು ಸ್ವಯಂ ಸೇವಾ ಸಂಸ್ಥೆಗಳಿಗೆ ಧನಸಹಾಯ ನೀಡುವುದು.

೦-೩ ವರ್ಷದ ಮಕ್ಕಳೆ ಪಾಲನೆ ಮಕ್ಕಳನ್ನು ನೈಸರ್ಗಿಕ ಆಪತ್ತುಗಳಿಂದ ರಕ್ಷಿಸುವುದು, ಪೂರಕ ಪೌಷ್ಠಿಕ ಆಹಾರ ನೀಡುವುದು, ಹೆಣ್ಣು ಮಕ್ಕಳು ಶಾಲೆ ಬಿಡುವುದ್ದನ್ನು, ತಪ್ಪಿಸುವುದು ಇದರ ಮುಖ್ಯ ಉದ್ದೇಶವಾಗಿದೆ.

## ಕೇಂದ್ರ ಸರಕಾರದ ಅನುದಾನಿತ ಯೋಜನೆಗಳು

**೧) ಬಾಲಿಕ ಸಮೃದ್ಧಿ ಯೋಜನೆ** :- ಕುಟುಂಬದಲ್ಲಿ ಮತ್ತು ಸಮೂದಾಯದಲ್ಲಿ ಹೆಣ್ಣು ಮಗುವಿನ ಜನನ ಹಾಗೂ ಅವಳ ತಾಯಿಯ ಬಗ್ಗೆ ಕುಟುಂಬದ ಹಾಗೂ ಸಮುದಾಯದಲ್ಲೂ ಕಂಡುಬರುವ ನಕಾರಾತ್ಮಕ ಧೋರಣೆ ಬದಲಾವಣೆ ಮಾಡಲು, ಬಾಲಕಿಯ ಮದುವೆಯ ವಯಸ್ಸನ್ನು ಹೆಚ್ಚಸುವುದು, ಹೆಣ್ಣು ಮಕ್ಕಳನು ಆದಾಯೊತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸಲು ಸಹಾಯ ಮಾಡುವುದು ಈ ಯೋಜನೆಯು ಮುಖ್ಯ ಉದ್ದೇಶವಾಗಿರುವುದು.

**೨) ಉದ್ಯೋಗಸ್ಥ ಮಹಿಳೆಯರಿಗೆ ವಸತಿ ನಿಲಯ ನಿರ್ಮಾಣ ಮತ್ತು ವಿಸ್ತರಣೆ** ಅವಿವಾಹಿತ ವಿದುವೆ, ಪರಿತ್ಯಕ್ತ, ವಿವಾಹ ವಿಚ್ಚೇಧನೆ ಆಗಿರುವ ಮತ್ತು ಮದುವೆ ಆಗಿದ್ದು ಗಂಡ ಊರಿನಲ್ಲಿರುವಂತಹ ಉದ್ಯೋಗಸ್ಥ ಮಹಿಳೆಯರಿಗೆ ವಸತಿ ಸೌಕರ್ಯ ಒದಗಿಸಲಾಯಿತು.

## ಸಮಾಜ ಕಲ್ಯಾಣ ಇಲಾಖೆ

ಸಮಾಜ ಕಲ್ಯಾಣ ಇಲಾಖೆ ಮೂಲಕ ಅರ್ಹ ಬುಡಕಟ್ಟು ಫಲಾನುಭವಿಗಳಿಗೆ ನಿರಂತರ ಆದಾಯ ತರುವಂತಹ ವೃತ್ತಿಗಳಾದ ಕಿರಾಣಿ ವ್ಯಾಪಾರ, ತರಕಾರಿ ಅಂಗಡಿ, ಹೋಟೆಲ್, ಖಾರಕುಟ್ಟುವ ಯಂತ್ರ, ಇಟ್ಟಿಗೆ ಭಟ್ಟಿ, ಬಡಗಿತನ, ಸೈಕಲ್ ಶಾಪ್, ಸೇಂಟ್ರಿಂಗ್ ವರ್ಕ್ಸ್, ಧಾನ್ಯ ಒಕ್ಕವ ಯಂತ್ರ, ಹೈನುಗಾರಿಗೆ, ಖಖಿಅ ಬೂತ್, ಹೊಲಿಗೆಯಂತ್ರ, ಹಿಟ್ಟಿನ ಕಿರಣಿ ಇತ್ಯದಿಗಳಲ್ಲಿ ಸಹಾಯಧನ ಮತ್ತು ಸಾಲದ ವತಿಯಿಂದ ಸ್ವತ್ತುಗಳನ್ನು ನೀಡಲಾಗುತ್ತದೆ.

**೧) ಶೈಕ್ಷಣಿಕ ನೆರವಿನ ಯೋಜನೆಗಳು** : ಈ ಯೋಜನೆಯ ಅಡಿಯಲ್ಲಿ ಪರಿಶಿಷ್ಠ ಪಂಗಡದ ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲೇ ಶಾಲೆಗೆ ಹೋಗುವ ಅಭ್ಯಾಸ ರೂಡಿಸಲು ಈ ಯೋಜನೆ

ರೂಪಿಸಲಾಗಿದೆ. ರಾಜ್ಯದಲ್ಲಿ ಇಂತಹ ಮಕ್ಕಳಿಗೆ ವಸತಿ ಶಾಲೆಗಳು, ನವೋದಯ ಶಾಲೆ, ಮೆಟ್ರಿಕ್ ಪೂರ್ವ ವಿಧ್ಯಾರ್ಥಿ ನಿಲಯ, ಅನುದಾನಿತ ವಿದ್ಯಾರ್ಥಿನಿಲಯಗಳಿಗೆ ಸಹಾಯಧನ, ಶಾಲೆಯ ವಿದ್ಯಾರ್ಥಿನಿಲಯಗಳು ಮುರಾರ್ಜಿ ದೇಸಾಯಿ ವಸತಿ ಶಾಲೆಗಳು, ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ, ಪ್ರತಿಭಾ ವಿದ್ಯಾರ್ಥಿ ವೇತನ, ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವವರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ, ಭಾರತ ಸರಕಾರದಿಂದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ, ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ, ಎಂ.ಫಿಲ್, ಪಿ.ಎಚ್.ಡಿ ವಿದ್ಯಾಥಿಗಳಿಗೆ ಧನ ಸಹಯ, ರ್‍ಯಾಂಕ್ ವಿದ್ಯಾರ್ಥಿಗಳಿಗೆ ನಗದು ಬಹುಮಾನ, ಪರಿಕ್ಷಾ ಪೂರ್ವ ತರಬೇತಿ ಕೇಂದ್ರ, ವಿದ್ಯಾರ್ಥಿನಿಯರಿಗೆ ಮೆಟ್ರಿಕ್ ಪೂರ್ವ ಪ್ರೋತ್ಸಾಹ ವಿದ್ಯಾರ್ಥಿ ವೇತನ, ಇಂಜನಿಯರಿಂಗ್ ವಿದ್ಯಾರ್ಥಿಗಳಿಗೆ ಸಾಧನ ಸಲಕರಣಿಗಳನ್ನು ಪೂರೈಸುವುದು ಮುಂತಾದ ಯೋಜನೆಗಳನ್ನು ಶೈಕ್ಷಣಿಕ ಮಟ್ಟದ ಸುಧಾರಣೆಗಾಗಿ ಕೈಗೊಳ್ಳಲಾಗಿದೆ.

೨) **ಉದ್ಯೋಗ ಹಾಗೂ ತರಬೇತಿ ನೆರವಿನ ಯೋಜನೆಗಳು** : ವಿದ್ಯಾಭ್ಯಾಸ ಪ್ರಾಥಮಿಕ ಅವಶ್ಯಕತೆಯಾದರೆ ಉದ್ಯೋಗ ನಂತರದ ಅಗತ್ಯವಾಗಿದೆ. ಅದ್ದರಿಂದ ಸರಕಾರ ಪರಿಶಿಷ್ಠ ಪಂಗಡದ ಜನರಿಗಾಗಿ ಉದ್ಯೋಗ ಸ್ವಯಂ ಉದ್ಯೋಗ ಕೈಗೊಳ್ಳಲು ನೆರವಾಗುವಂತೆ ವಿವಿಧ ವಿಭಾಗಗಳಲ್ಲಿ ತರಬೇತಿ ನೀಡಲಗುತ್ತಿದೆ. ಅವುಗಳಲ್ಲಿ ಮುಖ್ಯವಾದವುಯಾವುವೆಂದರೆ –

೩) **ಮಹಿಳೆಯರಿಗೆ ವೃತ್ತಿ ಶಿಕ್ಷಣ ತರಬೇತಿ** :– ಪರಿಶಿಷ್ಠ ಪಂಗಡದ ಮಹಿಳೆಯರಿಗೆ ಹೊಲಿಗೆ ತರಬೇತಿ ನೀಡುವ ಉದ್ದೇಶದಿಂದ ರಾಜ್ಯದ್ಯಾಂತ ಹೊಲಿಗೆ ತರಬೇತಿ ಕೇಂದ್ರಗಳು ನಡೆಸಲಾಗುತ್ತದೆ.

೪) **ಹೊಲಿಗೆ ಯಂತ್ರ ಸರಬರಾಜು** :– ಹೊಲಿಗೆ ತರಬೇತಿ ಪೂರ್ಣಗೊಂಡ ನಂತರ ತಾಂತ್ರಿಕ ಶಿಕ್ಷಣ ಇಲಾಖೆಯು ಭೋಧಕ ವರ್ಗದವರ ಸಹಾಯದಿಂದ ಇಲಾಖೆವತಿಯಿಂದ ಪರೀಕ್ಷೆ ನಡೆಸಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದಂತಹ ಮಹಿಳೆಯರಿಗೆ ಪ್ರಮಾಣ ಪತ್ರ ಹಾಗೂ ಒಂದು ಹೊಲಿಗೆ ಯಂತ್ರ ಉಚಿತವಾಗಿ ನೀಡಲಾಗುವುದು. ಇದಲ್ಲದೇ ನವಚೇತನ, ಬೆರಳಚ್ಚು ಮತ್ತು ಶೀಘ್ರ ಲಿಪಿ ತರಬೇತಿ ಕಾನೂನು ಪದವಿದಾರರಿಗೆ ಶಿಷ್ಯವೇತನ, ಕಾನೂನು ಪದವಿದಾರರ ಯೋಜನೆಯನ್ನು ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಬುಡಕಟ್ಟುವಿನ ಸುಧಾರಣೆಗಾಗಿ ಕೈಗೊಳ್ಳಲಾಗಿದೆ.

**ಇ) ಸಾಮಾಜಿಕ – ಆರ್ಥಿಕ ನೆರವಿನ ಯೋಜನೆಗಳು :**

**ಅ) ಅಸ್ಪೃಶ್ಯತೆ ನಿವಾರಣೆ** :– ಈ ಯೋಜನೆಯಡಿ ೨ ಕಾರ್ಯಕ್ರಮ ಜಾರಿಗೊಳಿಸಲಾಗುತ್ತದೆ. ಅಂತರ್ ಜಾತಿ ವಿವಾಹ, ಆಸ್ಪೃಶ್ಯತೆ ನಿವಾರಣೆಯ ನಿಟ್ಟಿನಲ್ಲಿ ಮಹತ್ವದ ಬೆಳವಣಿಗೆಯಾಗಿದೆ. ಇದನ್ನು ಪ್ರೋತ್ಸಾಹಿಸಲು ಸರಕಾರ ಕಾರ್ಯಕ್ರಮ ಹಮ್ಮಿಕೊಂಡಿದೆ.

**ಆ) ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಠ ಜಾತಿಯುವರಿಗೆ ಪರಿಹಾರ** :- ದೌರ್ಜನ್ಯ ಕಾಯ್ದೆ ೧೯೮೯ ಹಾಗೂ ೧೯೯೫ ನಿಯಮದ ಅನ್ವಯಬರುವ ಎಲ್ಲಾ ದೌರ್ಜನ್ಯ ಪ್ರಕರಣಗಳಿಗೆ ಪರಿಹಾರ, ಪುನರ್ವಸತಿ ಕಲ್ಪಿಸುವ ಸಲುವಾಗಿ ಈ ಯೋಜನೆಯನ್ನು ರೂಪಿಸಲಾಗಿದೆ.

**ವಿಶೇಷ ಘಟಕ ಯೋಜನೆಗೆ ವಿಶೇಷ ಕೇಂದ್ರಿಯ ನೆರವು**

ವಿಶೇಷ ಘಟಕ ಯೋಜನೆಯಡಿ ರಾಜ್ಯದಲ್ಲಿ ಅನುಷ್ಠಾನವಾಗುತ್ತಿರುವ ವಿವಿಧ ಯೋಜನೆಗಳಿಗೆ ಪೂರಕವಾಗಿ ಭಾರತ ಸರಕಾರದಿಂದ ವಿಶೇಷ ಕೇಂದ್ರಿಯ ನೆರವನ್ನು ನೀಡಲಾಗುತ್ತಿದೆ. ಈ ಘಟಕದಡಿಯಲ್ಲಿ ಅಂಬೇಡ್ಕರ್ ವಸತಿ ಯೋಜನೆ, ಆಶ್ರಯ ವಸತಿ ಯೋಜನೆ ಮುಂತಾದವುಗಳನ್ನು ಕೈಗೊಳ್ಳಲಾಗುವುದು.

## ಕರ್ನಾಟಕ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ವರ್ಗಗಳ ಅಭಿವೃದ್ದಿ ನಿಗವು ನಿಯಮಿತದಿಂದ ಜಾರಿಯಾಗುತ್ತಿರುವ ಕಾರ್ಯಕ್ರಮಗಳು

ಕರ್ನಾಟಕ ಸರಕಾರ ೧೯೭೫ ರಲ್ಲಿ ಕರ್ನಾಟಕ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ವರ್ಗಗಳ ಅಭಿವೃದ್ದಿ ನಿಗಮವನ್ನು ಸ್ಥಾಪಿಸಿದೆ. ನಿಗಮದಿಂದ  ಅನುಷ್ಠಾನವಾಗುತ್ತಿರುವ ಯೋಜನೆಗಳು ಕೆಳಕಂಡಂತೆ ಇವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಸ್ವಯಂ ಉದ್ಯೋಗ ಯೋಜನೆ, ಉದ್ಯಮಶೀಲತಾ ಅಭಿವೃದ್ದಿ ಯೋಜನೆ, ಮೈಕ್ರೋಕ್ರೆಡಿಟ್ ಯೋಜನೆ, ನೇರ ಸಾಲ ಯೋಜನೆ ಮುಂತಾದವುಗಳು.

**ಅ) ಭೂ ಒಡೆತನ ಯೋಜನೆ** :- ಬುಡಕಟ್ಟು ಪಂಗಡದವರು ಬಹುಪಾಲು ಕೃಷಿ ಕೂಲಿಗಳಾಗಿದ್ದು, ವ್ಯವಸಾಯ ಮಾಡುವ ಆಕೆ ಹಾಗೂ ಅನುಭವ ಇರುವುದರಿಂದ ನಿಗಮವತಿಯಿಂದ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ವರ್ಗಕ್ಕೆ ಸೇರಿಲ್ಲದವರಿಂದ ಭೂಮಿಯನ್ನು ಖರೀದಿಸಿ ಆರ್ಹ ಫಲಾನುಭವಿಗಳಿಗೆ ಹಂಚುವ ಯೋಜನೆಗಯನ್ನು ರೂಪಿಸಲಾಗಿದೆ. ಈ ಯೋಜನೆಯಲ್ಲಿ ಪ್ರತಿ ಕುಟುಂಬಕ್ಕೆ ೨ ಏಕರೆ ಖುಷ್ಕಿ ಅಥವಾ ಒಂದು ಎಕರೆ ತರಿ ಜಮೀನನ್ನು ಒದಗಿಸಲಾಗುತ್ತದೆ ಇದರ ಘಟಕದ ವೆಚ್ಚ ರೂ ೬೦,೦೦೦ ಗಳು, ಇದರಲ್ಲಿ ೫೦%ರಷ್ಟು ಭಾಗ ಅವದ್ದಿ ಸಾಲವಾಗಿರುತ್ತದೆ. ಅವಳ ಸಾಲಕ್ಕೆ ಶೇ.೬ ವಾರ್ಷಿಕ ಬಡ್ಡಿ ವಿಧಿಸಲಾಗುವುದು. ಇದಕ್ಕೆ ಬರಬೇಕಾದ ಅವದಿ ಸಾಲವನ್ನು ರಾಷ್ಟ್ರೀಯ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ವರ್ಗಗಳ ಅರ್ಥಿಕ ಹಾಗೂ ಅಭಿವೃದ್ದಿ ನಿಗಮದಿಂದ ಪಡೆಯಲಾಗುವುದು. ಈ ಮೊದಲನೆಯ ಫಲಾನುಭವಿಗಳು ಬುಡಕಟ್ಟಿಗೆ ಸೇರಿ ಭೂ ರಿಹಿತ ಕೃಷಿ ಕೂಲಿಯಾಗಿ ಮಹಿಳಾ ಅಭ್ಯರ್ಥಿಯಾಗಿರಬೇಕು. ಫಲಾನುಭವಿಯು ಸುಸ್ತಿದಾರನಗಿರಬಾರದು. ಈ ಯೋಜನೆಗೆ ಒಂದು ಆಯ್ಕೆ ಸಮಿತಿಯಿದ್ದು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಇದರ ಅಧ್ಯಕ್ಷರಾಗಿರುತ್ತಾರೆ. ಈ ಯೋಜನೆಯಲ್ಲಿ ದುರುಪಯೋಗವಾಗುವುದನ್ನು ತಡೆಗಟ್ಟುವುದಕೋಸ್ಕರ ಮಹಿಳಾ ಫಲಾನುಭವಿಯನ್ನು ಆಯ್ಕೆ ಮಾಡುತ್ತಾರೆ.

**ಆ) ಗಂಗಾ ಕಲ್ಯಾಣ ಯೋಜನೆ** :- ಸರಕಾರ ನಿರ್ದೇಸಿರುವ ರೀತಿ ಆಯವ್ಯಯದಲ್ಲಿ ಒದಗುತಿರುವ ಹಣದಲ್ಲಿ ಶೇ ೫೦% ರಷ್ಟು ಗಂಗಾ ಕಲ್ಯಾಣ ಯೋಜನೆಯಡಿ ಕೊರೆಯಬೇಕೆಂದು ಆದೇಶಿಸಲಾಗಿದೆ. ಗಂಗಾ ಕಲ್ಯಾಣ ಯೋಜನೆಯಡಿ ಕೊರೆಯಬೇಕಾಗಿರುವ ಕೊಳವೆ ಬಾವಿಗಳ ಗುರಿಯನ್ನು ಜಿಲ್ಲಾವಾರು ನಿಗದಿಪಡಿಸಲಾಗಿದೆ.

ವೈಯಕ್ತಿಕ ನೀರಾವರಿ ಕೊಳವೆ ಬಾವಿ ಯೋಜನೆಗಿಂತ ಇದು ಭಿನ್ನವಾಗಿದ್ದು, ಬುಡಕಟ್ಟು ಪಂಗಡದ ಸಣ್ಣ, ಅತಿ ಸಣ್ಣ ಗುಂಪಿಗೆ ಸೇರಿದ ಭೂಮಿಗೆ ನೀರಾವರಿ ಸೌಲಭ್ಯ ಒದಗಿಸುವುದು. ಈ ಯೋಜನೆಯ ಮುಖ್ಯ ಗುರಿಯಾಗಿದೆ. ಈ ಯೋಜನೆಯಡಿ ನೀಡುವ ಸೌಲಭ್ಯ ಪೂರ್ತಿ ಉಚಿತವಾಗಿದ್ದು, ಫಲನುಭವಿಯು ಯಾವುದೇ ಖರ್ಚನ್ನು ಭರಿಸಬೇಕಾಗಿಲ್ಲ. ಇದರ ನಿರ್ವಹಣೆಯನ್ನು ೩ ವರ್ಷಗಳವರೆಗೆ ನಿಗಮವೇ ನೋಡಿಕೊಳ್ಳುವುದು.

ಈ ಯೋಜನೆಯಡಿ ಒಳಗೊಳ್ಳುವ ಫಲಾನುಭವಿಗಳಿಗೆ ವೈಜ್ಞಾನಿಕವಾಗಿ ವ್ಯವಸಾಯ ಮಾಡುವ ಬಗ್ಗೆ ಹಾಗೂ ಇತರೆ ಬೆಳೆ ತೆಗೆಯುವ ಕ್ರಮದ ಬಗ್ಗೆ ಹೆಚ್ಚಿನ ಜ್ಞಾನಕ್ಕಾಗಿ ಸೂಕ್ತ ತರಬೇತಿ ನೀಡಲಾಗುತ್ತದೆ.

ಹೀಗೆ ಮುಂತಾದ ಕಾರ್ಯ ಯೋಜನೆಗಳನ್ನು ಸರಕಾರವು ಹಮ್ಮಿಕೊಳ್ಳುವುದರ ಮೂಲಕ ಪರಿಶಿಷ್ಠ ಬುಡಕಟ್ಟುಗಳ ಅಭಿವೃದ್ದಿಗಾಗಿ ಪ್ರಯತ್ನ ಪಡುತ್ತಿರುವುದು. ಇಂತಹ ಯೋಜನೆಗಳು ಏಷ್ಟರ ಮಟ್ಟಿಗೆ ಸಮೂದಾಯಗಳಿಗೆ ತಲುಪಿವೆ ಎನ್ನುವುದನ್ನು ನೋಡಿದರೆ. ಅದು ತಂಬಾ ಕೆಳ ಹಂತದ ಸ್ಥಿತಿಯಲ್ಲಿರುವುದು ಕಂಡುಬರುವುದು.

ಸರಕಾರದ ಅನೇಕ ಯೋಜನೆಗಳ ಫಲವನ್ನು ಪಡೆಯುವಲ್ಲಿ ಕೆಲವೊಂದು ಸಮೂದಾಯಗಳು ಮಾತ್ರ ಯಶಸ್ವಿಯಾಗಿ ಫಲಕಾರಿಯಾಗಿವೆ. ಆದರೆ ಇನ್ನೂ ಕೆಲವು ಸಮೂದಾಯಗಳು ಅಂತಹ ಯೋಜನೆಯಿಂದ ದೂರವೇ ಇದ್ದಾರೆ. ಹರಿಣಶಿಕಾರಿ ಸಮೂದಾಯದ ಕೆಲವೊಂದು ಕುಟುಂಬಗಳಲ್ಲಿ ತಾವು ಪರಿಶಿಷ್ಠ ಪಂಗಡಕ್ಕೆ ಸೇರಿದ ಸಮೂದಾಯವಾಗಿದೆ ಎಂಬಂತಹ ಅರಿವು ಇರುವುದಿಲ್ಲ. ಸರಕಾರವು ಹರಿಣಶಿಕಾರಿ ಸಮೂದಾಯಕ್ಕೆ ಅನೇಕ ಯೋಜನೆ ಫಲವನ್ನು ಪಡೆಯುವಂತೆ ಮಾಡಿದರೂ ಕೂಡಾ ಆ ಯೋಜನೆಗಳ ಫಲವನ್ನು ಪಡೆದುಕೊಳ್ಳುವಲ್ಲಿ ಸಾಧ್ಯವಾಗುತ್ತಿಲ್ಲ. ಇದ್ದಕೆ ಇದ್ದಂತ ಮುಖ್ಯ ಕಾರಣವೇನೆಂದರೆ, ಸಮೂದಾಯವು ಶಿಕ್ಷಣದಿಂದ ದೂರ ಉಳಿದಿರುವುದು, ಸಮಾಜದ ಮುಖ್ಯವಾಹಿನಿಯಿಂದ ದೂರವಿರುವುದು. ಮಾಹಿತಿಯ ಕೊರತೆ ಮುಂತಾದವುಗಳು, ಹರಿಣಶಿಕಾರಿ ಸಮೂದಾಯದಲ್ಲಿ ಕೇಲವೊಂದು ಶಿಕ್ಷಿತ ಕುಟುಂಬಗಳು ಮಾತ್ರ ಸರಕಾರದ ಯೋಜನೆಗಳನ್ನು ಪಡೆಯುವಲ್ಲಿ ಮುಂದಾಗಿರುವುದು. ಅಲ್ಲದೇ ಕೆಲವೊಂದು ಸರಕಾರಿ ಹುದ್ದೆಯಲ್ಲಿರುವ ವ್ಯಕ್ತಿಗಳು, ಮಾತ್ರ ಸರಕಾರದ ಯೋಜನೆಯ ಮಾಹಿತಿಯನ್ನು ಹೊಂದಿದ್ದಾರೆ. ಹೀಗಾಗಿ ಬಹಳಷ್ಟು ಜನರು ಅನಕ್ಷರಸ್ಥರಾಗಿದ್ದು, ಯೋಜನೆಗಳ ಮಾಹಿತಿಯಿಲ್ಲದೇ ಅಂಧಕಾರದಲ್ಲಿ ತಮ್ಮ ಜೀವನವನ್ನು

ತಳ್ಳುತ್ತಿದ್ದಾರೆ. ಬುಡಕಟ್ಟು ಸಮೂದಾಯ ಮತ್ತು ಅಭಿವೃದ್ಧಿ ಚಲನೆಯ ನಡುವೇ ಸಂಘರ್ಷಾತ್ಮಕ ವಿಚಾರ ವಿನಿಯೋಗಗೊಳುತ್ತಿರುವುದನ್ನು ಕಾಣಬಹುದುಹಿ ವಾಣಿಜ್ಯ ಮನೋಭಾವವನ್ನು ಮೈಗೊಡಿಸಿಕೊಳ್ಳದೆ ಅಭಿವೃದ್ಧಿ ಸಾಧ್ಯವಿಲ್ಲ. ಈ ಬಗೆಯ ಮನೋಭಾವವೇ ಆಭಿವೃದ್ಧಿಗೆ ಕಂಟಕವಾದುದಾಗಿದೆ. ಬುಡಕಟ್ಟು ಸಮಾಜವು ಸಂಪರ್ಕರಹಿತ ದ್ವೀಪದಂತಹ ಬದುಕನ್ನು ಬಯಸುತ್ತದೆ. ಆದರೆ ಅಭಿವೃದ್ಧಿಗೆ ಸಂಪರ್ಕ ಸೂಚನೆ ತುಂಬಾ ಮುಖ್ಯ. ಆಧುನಿಕ ಯುಗದ ಅಭಿವೃದ್ಧಿಯು ಬಹು ಮುಖ್ಯ ಲಕ್ಷಣವೆಂದರೇ ಚಲನೆ. ಇಡೀ ಸಮಾಜ ಜನಸ್ತೊಮವೇ ಚಲನೆಯಲ್ಲಿರಬೇಕು. ಆದರೆ ಬುಡಕಟ್ಟುಗಳಲ್ಲಿ ಚಲನೆಗೆ ಅವಕಾಶ ಕಡಿಮೆ ಇಂತಹ ಮನೋವೃತ್ತಿ ಸಹಜವಾಗಿಯೇ ಬುಡಕಟ್ಟು ಸಮೂದಾಯಗಳ ಅಭಿವೃದ್ದಿಯಲ್ಲಿ ಹಿನ್ನಡೆಯನ್ನು ಹೊಂದಲು ಕಾರಣವೆನ್ನಬಹುದು.

ಹರಣಶಿಕಾರಿ ಸಮೂದಾಯದಲ್ಲಿ ಜನರು ಸ್ವಲ್ಪ ಒರಟಾದ ಸ್ವಭಾವವನ್ನು ಹೊಂದಿದ್ದು, ಸಮಜದಲ್ಲಿ ತಾವು ಬೇರೆಯೇ ಎಂಬ ಭಾವನೆಯನ್ನು ಹೊಂದಿದಾರೆ. ಈ ಹರಿಣಶಿಕಾರಿ ಸಮೂದಾಯದ ಅಭಿವೃದ್ದಿಗಾಗಿ ಅನೇಕ ಸ್ವಯಂ ಸೇವ ಸಂಸ್ಥೆಗಳು ಕಾರ್ಯನಿರ್ವಹಿಸಿವೆ ಕ್ಷೇತ್ರ ಕಾರ್ಯಚರಣೆಯ ಸಂದರ್ಭದಲ್ಲಿ ದೂರೆತ ಮಾಹಿತಿ ಪ್ರಕಾರಹಿ ಕೆಲವು ಬ್ಯಾಂಕಗಳು ಇವರಿಗೆ ಸಾಲ ಸೌಲಭ್ಯವನ್ನು ನೀಡಲು ಮುಂದಾಗಿದು, ಸಾಲವನ್ನು ಪಡೆದ ಕೆಲವು ಜನರಿಗೆ ಅಟೋ ರಿಕ್ಷಾ ಕೊಡಿಸಿದರೆ, ಇನ್ನೂ ಕೇಲವು ಮಹಿಳೆಯರಿಗೆ ಹೊಲಿಗೆ ಯಂತ್ರವನ್ನು ಕೊಡಿಸಿದರು ಆದರೆ ಅದರ ಸರಿಯಾದ ಉಪಯೋಗವನ್ನು ಪಡೆಯದೇ ಜೀವಾನಾದ್ದರಕ್ಕೆ, ಆರ್ಥಿಕತೆ ಸುಧಾರಣೆಗೆ ಅವಕಾಶ ಮಾಡಿಕೊಟ್ಟು ವಸ್ತುಗಳನ್ನೇ ಮಾರಿಕೊಂಡರು. ಅಲ್ಲಿಗೆ ಬ್ಯಾಂಕ್ ಸಾಲವನ್ನು ಕೂಡಾ ಮರುಪಾವತಿಸಿಲ್ಲ ಎಂದು ಹೇಳಿದರು. ಹೀಗೆ ಸರಕಾರವೇ ಇರಲ್ಲಿ ಅಥವಾ ಸ್ವಯಂ ಸೇವಾ ಸಂಸ್ಥೆಗಳೇ ಆಗಿರಲ್ಲಿ ಅವರು ನೀಡಿದ ಸವಲತ್ತುಗಳು ದುರ್ಬಳಕೆಗೊಂಡಿರುವುದು ಕಂಡುಬರುವುದು.

ಇನ್ನೂ ಹರಿಣ ಶಿಕಾರಿ ಮಹಿಳೆರ ಸಂದರ್ಭಕ್ಕೆ ಬಂದರೆ, ಸರಕಾರದ ಯೋಜನೆಗಳಲ್ಲಿ, ಅವಕಾಶಗಳಲ್ಲಿ ಅವುಗಳ ಬಗ್ಗೆ ಸರಿಯಾದ ಮಾಹಿತಿಯಿಲ್ಲದ ಕಾರಣ ಮಹಿಳೆಯರು ಸಂಪೂರ್ಣವಾಗಿ ಅಭಿವೃದ್ಧಿಯಹಂತದಲ್ಲಿ ಗೌಣ್ಯಸ್ಥಿತಿಯಲ್ಲಿರುವುದು ಕಂಡುಬರುವುದು. ಹರಿಣ ಶಿಕಾರಿ ಮಹಿಳೆಯರು ಶೈಕ್ಷಣಿಕ ಮಟ್ಟವು ಕೂಡ ತೀರಾ ಕಡಿಮೆಯಿದ್ದು, ಸಾಂಪ್ರದಾಯಿಕ ಜೀವನದ ನೆಲೆಯಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದು, ಅದರಿಂದ ಹೊರ ಬಂದ ಸರಕಾರದ ಯೋಜನೆಗಳ ಬಗ್ಗೆ ಮಾಹಿತಿ ಪಡೆದುಕೊಂಡು, ಅದನ್ನು ಪಡೆದುಕೊಳ್ಳವುದು ಮರಿಚಿಕೆಯ ವಿಷಯವಾಗಿದೆ. ಇಂತಹ ಪರಿಸ್ಥಿತಿಯನ್ನು ಅರಿತು ಮಹಿಳೆಯರ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ೧೯೯೩ ರಲ್ಲಿ ಸ್ಥಾಪನೆಯಾದ ಉಜ್ವಲಾ ಗ್ರಾಮೀಣ ಅಭಿವೃದ್ಧಿ ಸೇವಾ ಸಂಸ್ಥೆಯು ಹರಿಣ ಶಿಕಾರಿ ಸಮೂದಾಯದ ಮಕ್ಕಳಿಗೋಸ್ಕರ ಒಂದು ಶಾಲೆಯನ್ನು ತೆರೆಯಿತು. ಈ ಸಂಸ್ಥೆಯು ವಿಜಾಪುರದಲ್ಲಿ ಕೂಡಾ ಒಂದು ಶಾಲೆಯನ್ನು ಹೊಂದಿರುವುದು. ಇದರ ಮುಖ್ಯ ಉದ್ದೇಶ ಮಹಿಳೆಯರುನ್ನು ಸಂಘಟಿತರಾಗಲು ಪ್ರೇರೆಪಿಸುವುದು, ಮಹಿಳೆಯರ ಸಾಮರ್ಥ್ಯ ಹೆಚ್ಚಿಸುವುದು. ಶಿಕ್ಷಣ, ತರಬೇತಿ ಮತ್ತು ವಿವಿಧ ಕಾರ್ಯಕ್ರಮಗಳ

ಮೂಲಕ ಜ್ಞಾನ ಮತ್ತು ಕೌಶಲ್ಯವನ್ನು ಬೆಳೆಸುವದು. ಸಂಪ್ರಾದಾಯಿಕ ಕಲೆ, ಕೌಶಲ್ಯಗಳನ್ನು ಪುನರ್ ಸ್ಥಾಪಿಸುವುದು ಬಾಲ ಕಾರ್ಮಿಕ, ಬಾಲ್ಯ ವಿವಾಹ, ಹಿಂದುಳಿದ ಮತ್ತು ಶೋಷಿತ ಜನರಿಗಾಗಿ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಶಿಶು ಮಕ್ಕಳು ಮತ್ತು ಮಹಿಳೆಯರ ಆರೋಗ್ಯ ಮತ್ತು ಕಲ್ಯಾಣ ವ್ಯವಸ್ಥೆಯನ್ನು ಪುನರ್ ಸ್ಥಾಪನೆ ಮಾಡುವುದು. ಸ್ವಯಂ ಸೇವಾ ಸಂಘಗಳ ಮೂಲಕ ಆದಾಯ ತರುವಂತಹ ಸುಸ್ಥಿರ ಉದ್ಯೋಗಾವಕಾಶಗಳ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

ಈ ಉಜ್ವಲಾ ಗ್ರಾಮೀಣ ಅಭಿವೃದ್ಧಿ ಸೇವಾ ಸಂಸ್ಥೆಯು ಮುಟ್ಟಿದಾಗ ಮಹಿಳೆಯರು ಸಂಘಟಿತರಾಗಲು ಪ್ರೋತ್ಸಹ ನೀಡಿತು ಮತ್ತು ಹರಿಣ ಶಿಕಾರಿ ಮಕ್ಕಳ ಶೈಕ್ಷಣಿಕ ಮಟ್ಟದ ಸುಧಾರಣೆಗಾಗಿ ಶಾಲೆಯ ಅವಶ್ಯಕತೆಯನ್ನು ಪೂರೈಸಿತು. ಆದರೆ ಸರಿಯಾದ ಪ್ರಮಾಣದ ಜನರ ಸಹಕಾರವಿಲ್ಲದ ಕಾರಣ ಇಂದು ಈ ಶಾಲೆಯನ್ನು ಮುಚ್ಚಲಾಗಿದೆ. ಹರಿಣ ಶಿಕಾರಿ ಸಮೂದಾಯದ ಕುಟುಂಬಗಳಲ್ಲಿ ಮಕ್ಕಳನ್ನು ಶಾಲೆಗೆ ಕಳುಹಿಸುವುದರ ಬಗ್ಗೆ ಅಷ್ಟೊಂದು ಕಾಳಜಿಯನ್ನು ಹೊಂದದ ಕಾರಣ ಕೂಡಾ ಶಾಲೆಯನ್ನು ಮಚ್ಚಲ್ಪಟ್ಟರು. ಇಂತಹ ಅನೇಕ ಅವಕಾಶಗಳನ್ನು ಸಾಂಪ್ರಾದಾಯಿಕ ಹಿನ್ನಲೆಯಲ್ಲಿ ತಿರಸ್ಕರಿಸುತ್ತಿದ್ದದ್ದು ಒಂದು ಸಮೂದಾಯದ ಅಭಿವೃದ್ದಿಗೆ ಹಿನ್ನಡೆಯಾಗಿರುವುದು.

ಹರಿಣ ಶಿಕಾರಿ ಸಮೂದಾಯದ ಕೆಲವು ಮಹಿಳೆಯರು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ದಿ ಇಲಾಖೆಯಿಂದ ಯೋಜಿಸಲ್ಪಟ್ಟ ಹೋಲಿಗೆ ತರಬೇತಿ ಕೇಂದ್ರದಲ್ಲಿ ಭಾಗವಹಿಸಿದ್ದರೂ ಕೂಡಾ ಸರಿಯಾದ ಪ್ರಮಾಣದ ಕಲಿಕೆ ಇರಲಿಲ್ಲ. ಈ ಸೌಲಭ್ಯವನ್ನೇ ಪಡೆದುಕೊಂಡ ಮಹಿಳೆಯ ಪ್ರಮಾಣ ಈ ಕೆಳಗಿನಂತಿವೆ.

| ಯೋಜನೆಯ ಫಲಪಡೆದುಕೊಂಡವರು | ಆವೃತ್ತಿ | ಶೇಕಾಡವಾರು |
|---|---|---|
| ಹೌದು | ೦೫ | ೮.೩೩ |
| ಇಲ್ಲಾ | ೫೫ | ೯೧.೬೭ |
| ಒಟ್ಟು | ೬೦ | ೧೦೦ |

ಮೇಲ್ಕಂಡ ಕೊಷ್ಟಕದ ಪ್ರಕಾರ ಕೇವಲ ೫ ಜನ ಮಹಿಳೆಯರು ಇದರ ಯೋಜನೆಯ ಫಲವನ್ನು ಪಡೆದುಕೊಂಡಿದ್ದು, ಹೊಲಿಗೆ ತರಬೇತಿಯ ಮುಕ್ತಾಯದ ನಂತರ ಮಹಿಳೆಯರಿಗೆ ಉಚಿತವಾಗಿ ಹೊಲಿಗೆ ಯಂತ್ರವನ್ನು ನೀಡಲಾಗುವುದು. ಆದರೆ ಇದರ ಸರಿಯಾದ ಪ್ರಯೋಜನೆಯನ್ನು ಪಡೆದುಕೊಳ್ಳದೆ, ಹೊಲಿಗೆ ಯಂತ್ರವನ್ನು ಕೆಲವು ಹಣಗೋಸ್ಕರ ಮಾರಿರುವುದು ಕಂಡುಬರುವುದು.

ಹರಿಣಶಿಕಾರಿ ಸಮೂದಾಯದಗೋಸ್ಕರ ಸರಕಾರದ ಅನೇಕ ವಸತಿ ಯೋಜನೆಗಳು, ಭಾಗ್ಯ ಲಕ್ಷ್ಮಿ ಯೋಜನೆ, ಭಾಗ್ಯ ಜ್ಯೋತಿ ಯೋಜನೆ, ಭೂ ಒಡೆತನ, ಗಂಗಾ ಕಲ್ಯಾಣ ಮುಂತಾದ

ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದ್ದರೂ ಕೂಡಾ ಅದರ ಸರಿಯಾದ ಫಲವನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಇದಕ್ಕೆ ಮುಖ್ಯವಾಗಿರುವ ಅಂಶಗಳನ್ನು ಗುರುತಿಸಿ ಸರಿಯಾಗಿ ಸರಕಾರದ ಯೋಜನೆಗಳು ಜನರಿಗೆ ತಲುಪುವಂತೆ ಮಾಡುವುದು ಮುಖ್ಯವಾಗಿರುವುದು. ಆಗ ಮಾತ್ರ ಅಭಿವೃದ್ದಿಯನ್ನು ಸಮಗ್ರರೀತಿಯಲ್ಲಿ ಸಾಧಿಸಲು ಸಾಧ್ಯವಾಗುವುದು.

ಹರಣ ಶಿಕಾರಿ ಸಮೂದಾಯವು ಇನ್ನೂ ಅಭಿವೃಧ್ಧಿಯ ಹಂತದಿಂದ ತುಂಬಾ ಕೂರುಳಿದಿರುವುದು ವಿಪರ್ಯಾಸದ ಸಂಗತಿಯಾಗಿರುವುದು. ಈ ಅಭಿವೃದ್ದಿಯ ಮಟ್ಟವನ್ನು ಮುಟ್ಟುವಲ್ಲಿ ಮಹಿಳೆ ಮತ್ತು ಪುರುಷರ ಸಮಾನವಾದ ಸಹಭಾಗಿತ್ವ ಹೊಂದುವುದು ಮುಖ್ಯವಾಗಿರುವುದು.

**ಅಡಿಟಿಪ್ಪಣೆ**

೧) ಡಾ|| ಎಚ್. ಎಂ. ಹೇಮಲತಾ: ಮಹಿಳಾ ಅಧ್ಯಯನ ಪು.೧೯.
೨) ಎಸ್. ರಾಜಶೇಖರ: ಭಾರತೀಯ ಸಮಾಜ ಪು, ೨೩೮
೩) ಅದೇ ಪು – ೨೪೬.
೪) ಎ.ಎಸ್. ಪ್ರಭಾಕರ್: ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪು. ೧೯
೫) ಮಾಹಿತಿ ನೀಡಿದವರು ಶಿವಾಜಿ ರಾಳೆ.

ಅಧ್ಯಾಯ ಏಳು

# ಸಾಂಸ್ಕೃತಿಕ ಪಲ್ಲಟಗಳು

೭.೧ ಚಾರಿತ್ರಿಕ ಪಲ್ಲಟಗಳು

೭.೨ ಸಾಮಾಜಿಕ ಮತ್ತು ಆರ್ಥಿಕ ಪಲ್ಲಟಗಳು

೭.೩ ಧಾರ್ಮಿಕ ಪಲ್ಲಟಗಳು

೭.೪ ರಾಜಕೀಯ ಪಲ್ಲಟಗಳು

ಭಾರತದಾದ್ಯಂತ ಅನೇಕ ಬುಡಕಟ್ಟು ಸಮುದಾಯಗಳು ಸಮಾಜದ ಆರ್ಥಿಕ, ರಾಜಕೀಯ ಮುಂತಾದ ಕಾರಣಗಳಿಂದ ಸ್ಥಿತ್ಯಂತರಗೊಳ್ಳಲಾಗುತ್ತಿದ್ದವು. ಸಮುದಾಯಗಳು ತಮ್ಮ ಸಂಸ್ಕೃತಿಯನ್ನು ವಿಭಿನ್ನವಾದ ರೂಪುರೇಷೆಗಳನ್ನು ಎಣೆದುಕೊಂಡಿದ್ದು, ಅಂತಹ ಕೆಲವು ಅಂಶಗಳು ಅಳಿಸಿಹೋಗುತ್ತಿರುವುದನ್ನು ಕಾಣಬಹುದು. ಈ ಕ್ರಿಯೆಯು ಮುಖ್ಯವಾಗಿ ಸಾಮಾಜಿಕ ಸಂರಚನೆಯಲ್ಲಿ ಉಂಟಾದ ಬದಲಾವಣೆಯ ಪ್ರಕ್ರಿಯೆಯಿಂದಾಗಿ ಸಮಾಜದಲ್ಲಿ ಕೆಲವು ಒತ್ತಡಗಳಿಗೂ ಅಥವಾ ಸಹಜವಾದ ಸಾಂಸ್ಕೃತಿಕ ಪಲ್ಲಟಗಳ ವಿನಿಯೋಗದಿಂದಲೂ ಆಗುವುದು. ಒಂದು ಹಂತದಲ್ಲಿ ಅಲೆಮಾರಿ ಜೀವನವನ್ನು ಸಾಗಿಸುತ್ತಿದ್ದ ಸಮುದಾಯಗಳು ಒಂದೆಡೆ ನೆಲೆನಿಂತು ಪ್ರತಿಯೊಂದು ಮಟ್ಟದಲ್ಲಿಯೂ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿವೆ. ಈ ರೀತಿಯ ಕಾರ್ಯಪ್ರವೃತ್ತಿಯು ಕೇವಲ ಕೆಲವು ಸಾಂಸ್ಕೃತಿಕ ಪಲ್ಲಟಗಳೊಂದಿಗೆ ಸಾಧ್ಯವಾಗುವುದು. ಇದಕ್ಕೆ ಹರಿಣಶಿಕಾರಿ ಸಮುದಾಯವು ಹೊರತಾಗಿಲ್ಲ. ಈ ಸಮುದಾಯದಲ್ಲಾದ ಪ್ರತಿಯೊಂದು ಪಲ್ಲಟನೆಗೆ ಸಾಂಸ್ಕೃತಿಕ ಸ್ಥಿತ್ಯಂತರವೇ ಕಾರಣವಾಗಿರುವುದು.

## ಚಾರಿತ್ರಿಕ ಪಲ್ಲಟಗಳು

ಹರಿಣಶಿಕಾರಿ ಸಮುದಾಯವು ತನ್ನದೇ ಆದ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದೆ. ಒಂದು ಕಾಲದಲ್ಲಿ ವೈಭವತೆಯಿಂದ ಬಾಳಿದ ಈ ಸಮುದಾಯವು ಅನೇಕ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸ್ಥಿತ್ಯಂತರಗಳ ಕಾರಣದಿಂದ ತಮ್ಮ ವೈಭವತೆಯನ್ನು ಕಳೆದುಕೊಳ್ಳುವಂತಾಯಿತು. ಒಂದು ಕಾಲದಲ್ಲಿ ರಾಜ ವಂಶರ ಸೇನಾ ಸೇವೆಯಲ್ಲಿ ಕಾರ್ಯ ನಿರ್ವಹಿಸಿದ ಈ ಸಮುದಾಯಗಳು ಮುಂದೆ ರಾಜ ವಂಶಗಳ ಪಳಿವಳಿಕೆಯಿಂದಾಗಿ ಅನೇಕ ರೀತಿಯ ಸಮಸ್ಯೆಗಳಿಗೆ ಒಳಗಾದವು. ಒಂದು ಕಡೆ ಆಶ್ರಯ ಪಡೆದುಕೊಂಡು ತಮ್ಮ ಜೀವನದ ನಿರ್ವಹಣೆಯಲ್ಲಿ ತೊಡಗಿದ ಈ ಸಮುದಾಯವು ರಾಜ ವಂಶಾವಳಿಯ ಅಳ್ವಿವಿಕೆಯಿಂದಾಗಿ ಅತಂತ್ರ ಸ್ಥಿತಿಗೆ ತಲುಪುವಂತಾಯಿತು. ಇಂತಹ ಸಂದರ್ಭದಲ್ಲಿ ಒಂದಾಗಿದ್ದ ಈ ಸಮುದಾಯದ ಗುಂಪು ತಮ್ಮ ಕುಟುಂಬ ನಿರ್ವಹಣೆಗಾಗಿ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗುವ ಕ್ರಿಯೆಯಲ್ಲಿ ತೊಡಗಿಕೊಂಡರು ಹೀಗೆ ಮುಂದೆ ಅಲೆಮಾರಿ ಜೀವನವನ್ನು ಸಾಗಿಸುತ್ತಾ ಗುಡ್ಡ, ಬೆಟ್ಟ, ಕಾಡು–ಮೇಡು, ದುರ್ಗಮ ಪ್ರದೇಶಗಳಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡರು. ತಮ್ಮ ಹೊಟ್ಟೆಪಾಡಿಗಾಗಿ ಅರಣ್ಯ ಸಂಪನ್ಮೂಲವನ್ನೇ ಅವಲಂಬಿಸಿದರು. ಅರಣ್ಯದಲ್ಲಿ ದೊರೆಯುವ ಗಡ್ಡೆ–ಗೆಣಸು, ಹಣ್ಣು–ಹಂಪಲುಗಳನ್ನು ಸಂಗ್ರಹಿಸುವ ಕ್ರಿಯೆಯಲ್ಲಿ ತೊಡಗಿಕೊಂಡರು. ಬೇಟೆಯಾಡುವುದನ್ನು ಮೂಲ ವೃತ್ತಿಯನ್ನಾಗಿ ಆಯ್ಕೆಮಾಡಿಕೊಂಡರು. ಹೀಗೆ ಸಮಾಜದ ಮುಖ್ಯವಾಹಿನಿಯಿಂದ ದೂರವಾದರು.

ಅಲೆಮಾರಿ ಜೀವನವನ್ನು ಸಾಗಿಸುತ್ತಿದ್ದ ಈ ಸಮುದಾಯದ ಜನರು ಅನೇಕ ರೀತಿಯ ಸಮಸ್ಯೆಗಳಿಗೆ ಒಳಗಾದರು. ಆಹಾರ ದೊರೆಕದ ಸಂದರ್ಭದಲ್ಲಿ ತಮ್ಮ ಹೊಟ್ಟೆಪಾಡಿಗಾಗಿ ಅನಿವಾರ್ಯವಾಗಿ ಕಳ್ಳತನವನ್ನು ಮಾಡಲು ಪ್ರಾರಂಭಿಸಿದರು. ಹೊಲ-ಗದ್ದೆಗಳಲ್ಲಿ ಫಸಲಿಗೆ ಬಂದ ಕಾಳು-ಕಡಿಗಳನ್ನು ರಾತ್ರೋರಾತ್ರಿಯ ಸಂದರ್ಭದಲ್ಲಿ ಕಳ್ಳತನದಿಂದ ಬೆಳೆ ಕಟಾವು ಮಾಡುತ್ತಿದ್ದರು. ಹಾಗೂ ಪ್ರಾಣಿಗಳನ್ನು ಕದ್ದು ಮಾರುವಂಥ ಪರಿಸ್ಥಿತಿಗೆ ಬಂದು ತಲುಪಿದರು. ಆದ್ದರಿಂದ ಈ ಸಮುದಾಯದ ಜನರನ್ನು ಸಮಾಜದಲ್ಲಿ ಅಪರಾಧಿಗಳು, ಕಳ್ಳರು, ದರೋಡೆಕೋರರು, ಸುಳ್ಳರು ಎಂದು ಹಣೆಪಟ್ಟಿ ಕಟ್ಟುವ ಸಂದರ್ಭ ಒದಗಿ ಬಂತು.

ನಂತರದ ಕಾಲಘಟ್ಟದಲ್ಲಿ ಬ್ರಿಟೀಷರ ಆಳ್ವಿಕೆಯ ಪ್ರಾಬಲ್ಯತೆಯನ್ನು ಪಡೆದುಕೊಂಡು ತನ್ನ ಅಧಿಕಾರವನ್ನು ಸ್ಥಾಪಿಸಿತು. ಇಡೀ ದೇಶದ ಮೇಲೆ ತನ್ನ ಹಿಡಿತವನ್ನು ಸಾಧಿಸಿತು. ಇಂಥ ಸಂದರ್ಭದಲ್ಲಿ ಬಂದ ಜಮೀನ್ದಾರಿ ಪದ್ಧತಿ, ಕೈಗಾರೀಕರಣದಿಂದ ಅನೇಕ ಮೂಲ ಕಸುಬಗಳಿಂದಲೂ ಸಮುದಾಯವು ಕೈಬಿಡುವಂತೆ ಮಾಡಿತು. ಇಂತಹ ಅನೇಕ ಕಾರ್ಯನೀತಿಗಳನ್ನು ರೂಪಿಸುವುದರ ಮೂಲಕ ಅನೇಕ ಬುಡಕಟ್ಟು ಸಮುದಾಯಗಳ ಮೇಲೆ ತನ್ನ ಪ್ರಾಬಲ್ಯತೆಯನ್ನು ಹೊಂದಿದರು. ಇಡೀ ಆರ್ಥಿಕತೆಯ ಮೇಲೆ ಸ್ವಾಮ್ಯತೆಯನ್ನು ಪಡೆಯುವಲ್ಲಿ ಯಶಸ್ವಿಯಾದರು. ಆಗ ಅತಂತ್ರ ಸ್ಥಿತಿಗೆ ತಲುಪಿದಂತಹ ಬುಡಕಟ್ಟು ಸಮುದಾಯಗಳು ಬೇರೆ ದಾರಿಯಿಲ್ಲದೆ ಬ್ರಿಟೀಷರ ಕೈವಶವಾದವು. ಇನ್ನೂ ಕೆಲವು ಸಮುದಾಯಗಳು ಬ್ರಿಟೀಷರ ವಿರುದ್ಧ ದಂಗೆಯೆದ್ದವು. ಆ ಹೋರಾಟದ ಸ್ವರೂಪ ತುಂಬಾ ಕ್ರಾಂತಿಕಾರಕವಾಗಿದ್ದವು. ಈ ರೀತಿಯ ಕ್ರಾಂತಿಕಾರಕ ಬೆಳವಣಿಗೆಗಳು ಬ್ರಿಟೀಷರಿಗೆ ಅಹಿತಕರವಾಗಿದ್ದು, ಅದನ್ನು ಸದೆ ಬಡಿಯುವ ತಂತ್ರಗಾರಿಕೆಯನ್ನು ರೂಪಿಸಿಕೊಂಡರು. ಅನೇಕ ಬುಡಕಟ್ಟು ಸಮುದಾಯಗಳನ್ನು ಬುಡಕಟ್ಟು ಸಮುದಾಯಗಳೆಂದು ಘೋಷಿಸುವುದರ ಮೂಲಕ ಅವರ ವಸಾಹತುಗಳಲ್ಲಿ ಕೂಡಿ ಹಾಕುವ ಪ್ರಯತ್ನವನ್ನು ಮಾಡಲಾಯಿತು. ಇದರ ಮೂಲಕ ದಂಗೆಯೆದ್ದ ಬುಡಕಟ್ಟು ಸಮುದಾಯದವರನ್ನು ಹತ್ತಿಕ್ಕುವ ಒಂದು ಪ್ರಯತ್ನವೆಂದೇ ಹೇಳಬಹುದು. ವಸಾಹತುಗಳಲ್ಲಿ ಹರಿಣಶಿಕಾರಿ ಸಮುದಾಯವನ್ನು ಬಂಧಿಸುವುದರ ಮೂಲಕ ಅದರ ಮೇಲೆ ಹಿಡಿತವನ್ನು ಸ್ಥಾಪಿಸಿದರು. ವಸಾಹತುಗಳಲ್ಲಿ ಬಂಧಿತ ಜನರನ್ನು ಹೊರಹೋಗದಂತೆ ಬೇಲಿಯನ್ನು ಹಾಕಿದರು. ಆಯಾ ಸಮುದಾಯದ ವ್ಯಕ್ತಿ ಹೊರಹೋಗಬೇಕಾದರೆ ಪೋಲೀಸರ ಅನುಮತಿ ಪಡೆದು ಹೋಗಬೇಕು. ಮತ್ತು ಅದಕ್ಕೂ ನಿರ್ಧಿಷ್ಟ ಕಾಲಾವಧಿಯನ್ನು ಸೂಚಿಸಲಾಗಿತ್ತು. ಇಂತಹ ಸಮುದಾಯಗಳನ್ನು ತುಂಬಾ ಅಮಾನವೀಯ ರೀತಿಯಲ್ಲಿ ನಡೆಸಿಕೊಂಡಿರುವುದನ್ನು ಕಾಣಬಹುದು. ಮುಂದೆ ದೇಶದ ಸ್ವಾತಂತ್ರ್ಯ ಘೋಷಣೆಯ ನಂತರ ವಸಾಹತುಗಳಿಂದ ಬಿಡುಗಡೆ ಹೊಂದಿದ ಹರಿಣಶಿಕಾರಿ ಸಮುದಾಯವು ಅನೇಕ ಪ್ರದೇಶಗಳಲ್ಲಿ ತಮ್ಮ ನೆಲೆಗಳನ್ನು ಹುಡುಕಿಕೊಂಡರು. ಇಂತಹ ವಸಾಹತುಗಳು ಇಂದಿನ ಸಂದರ್ಭದಲ್ಲಿ ನಗರಗಳಿಂದ ಸುತ್ತುವರೆದ ಪ್ರದೇಶವಾಗಿರುವುದು. ಆದರೂ ಕೂಡ ಹರಿಣಶಿಕಾರಿ ಸಮುದಾಯದ ಕೆಲವೊಂದು ಅಂಶಗಳಲ್ಲಿ ಪಲ್ಲಟಗಳಾಗಿದ್ದರೂ ಕೂಡ ಇಂದಿಗೂ ಕೆಲವು ಸಾಂದರ್ಭಿಕ ಆಚರಣೆಗಳು ಕಂಡುಬರುವವು.

ಒಂದು ಕಾಲದಲ್ಲಿ ಹರಿಣಶಿಕಾರಿ ಸಮುದಾಯವು ಒಂದು ಒಳ್ಳೆಯ ಬದುಕಿನ ನೆಲೆಯನ್ನು ಹೊಂದಿದ್ದು, ಮುಂದೆ ಅನೇಕ ಸಮಸ್ಯೆಗಳಿಗೆ ಸಿಲುಕಿ ಹೋರಾಡಿ ತಮ್ಮ ಉಳಿವಿಗಾಗಿ ಅನೇಕ ಪರ್ಯಾಯ ದಾರಿಯನ್ನು ಕಂಡುಕೊಂಡಿದ್ದರು. ಕಾಲಕಾಲಕ್ಕೆ ತಕ್ಕಂತೆ ಅನೇಕ ರೀತಿ ಸಾಮಾಜಿಕ, ಆರ್ಥಿಕ, ರಾಜಕೀಯ ಪಲ್ಲಟದ ಕಾರಣದಿಂದಲೇ ಅನೇಕ ರೀತಿಯ ಬದಲಾವಣೆಯ ಹಂತವು ಹರಿಣಶಿಕಾರಿ ಸಮುದಾಯದಲ್ಲಿ ಕಂಡುಬರುವುದು.

## ಸಾಮಾಜಿಕ ಮತ್ತು ಆರ್ಥಿಕ ಪಲ್ಲಟ

ಹರಿಣಶಿಕಾರಿ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳಲ್ಲಿ ಅನೇಕ ರೀತಿಯ ಬದಲಾವಣೆಯನ್ನು ಕಾಣಬಹುದು. ಸಾಮಾಜಿಕ ಸಂದರ್ಭದ ಪ್ರತಿಯೊಂದು ಹಂತದಲ್ಲೂ ಸಮುದಾಯದ ಪ್ರಗತಿಯಲ್ಲಿ ಸ್ಥಿತ್ಯಂತರಗಳುಂಟಾಗಿರುವುದು ಸಮಾಜವು ಸದಾ ಬದಲಾವಣೆಯ ಪ್ರಕ್ರಿಯೆಯೆಗೆ ಒಳಗಾಗಿರುವುದರಿಂದ ಪ್ರತಿಕ್ಷಣದ ಘಳಿಗೆಯು ಒಂದು ಹೊಸ ವಿಷಯ, ವಸ್ತು, ವಿಚಾರವನ್ನು ಹೊರಹೊಮ್ಮಿಸುವುದು. "ವ್ಯಕ್ತಿಯ ಒಳಸುಳಿ ಮತ್ತು ಸ್ವಭಾವಗಳು ಇದ್ದಕ್ಕಿದ್ದಂತೆ ಪ್ರಕಟಗೊಳ್ಳುವುದಿಲ್ಲ. ಅವುಗಳಿಗೆ ಒಂದು ಇತಿಹಾಸ, ಒಂದು ಒತ್ತಡ ಇರುತ್ತದೆ. ಒಳ ಒತ್ತಡವನ್ನು ಪ್ರಚೋದಿಸುವ ಹೊರ ಒತ್ತಡಗಳೂ ಇರುತ್ತವೆ. ಹೀಗೆ ಒಳ-ಹೊರ ಒತ್ತಡಗಳ ಒಂದು ಇತಿಹಾಸ ಮನುಷ್ಯ ಸ್ವಭಾವ-ಲಕ್ಷಣಗಳನ್ನು ನಿರ್ಧಿಷ್ಟ ವಿನ್ಯಾಸವಾಗಿ ಮೂಡಿಸುತ್ತದೆ." ಇಂತಹ ಗುಣಸ್ವಭಾವದ ಲಕ್ಷಣಗಳು ಮೂಲತಃ ಸಮಾಜದಿಂದ ಪ್ರೇರಿತವಾಗಿರುತ್ತವೆ. ಈ ರೀತಿಯ ಕ್ರಿಯೆಗೆ ಸಹಜವಾಗಿ ಮನುಷ್ಯನಲ್ಲದೆ ಎಲ್ಲಾ ಸಮುದಾಯವು ಒಳಗಾಗುವುದು.

ಸಾಮಾಜಿಕ ಸಂಸ್ಥೆಗಳೆನಿಸಿಕೊಂಡ ವಿವಾಹ, ಕುಟುಂಬ, ಶಿಕ್ಷಣ ಮುಂತಾದವುಗಳು ಸಾಮಾಜಿಕ ಕ್ರಿಯೆಗೆ ಒಳಗಾಗಿ ಅನೇಕ ಹಂತದ ಬದಲಾವಣೆ ಸ್ಥಿತಿಗೆ ಒಳಗಾಗಿರುವುದು. ಹರಿಣಶಿಕಾರಿ ಸಮುದಾಯವು ಕಾಡಿನಲ್ಲಿ ತಮ್ಮ ವಾಸಸ್ಥಾನವನ್ನು ಕಂಡುಕೊಂಡಿದ್ದರು. ಇಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆ ಕಂಡುಬರುತ್ತಿತ್ತು. ಕುಟುಂಬದಲ್ಲಿ ಅನೇಕ ಹಿರಿಯ ತಲೆಮಾರಿನವರಿದ್ದು, ಸಾಂಪ್ರದಾಯಿಕ ಕಟ್ಟುಪಾಡುಗಳನ್ನು ಅಚ್ಚುಕಟ್ಟಾಗಿ ಪಾಲಿಸುವಂತೆ ನಿರ್ದೇಶಿಸುತ್ತಿದ್ದರು. ದೈವಶಕ್ತಿ, ಮೂಡನಂಬಿಕೆಯ ಮೇಲೆ ಅಪಾರವಾದ ನಂಬಿಕೆಜೋತೆಗೆ ಜನರು ಹಿರಿಯರ ಪೂಜೆಯನ್ನು ಕೂಡಾ ಮಾಡುತ್ತಿದ್ದರು. ಕಾಲಕ್ರಮೇಣ ಬದಲಾದ ಸಾಮಾಜಿಕ ಆರ್ಥಿಕ ಪರಿಸ್ಥಿತಿಯಿಂದಾಗಿ ಇಂದು ಅನೇಕ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಪರಿವರ್ತಿತಗೊಂಡಿರುವುದು. ತುಂಬಾ ಒರಟಾದ ವ್ಯಕ್ತಿತ್ವವನ್ನು ಹೊಂದಿದ ಜನ ಅನೇಕ ಕಲಹಗಳಿಗೆ ಬಹುಬೇಗನೇ ಸ್ಪಂದಿಸುವುದರಿಂದಲೂ ಕೂಡಾ ಕುಟುಂಬಗಳು ಒಡೆದು ಹೋಗಿರುವುದು.

ಹರಿಣಶಿಕಾರಿ ಸಮುದಾಯದ ಜನರನ್ನು ಅವರ ವೇಶಭೂಷಣದ ಮೂಲಕ ಗುರುತಿಸಲಾಗುತ್ತಿತ್ತು. ಹರಿಣಶಿಕಾರಿ ಸಮುದಾಯದ ಪುರುಷರು ನಿಲುವಂಗಿ ಮತ್ತು ಪಂಚೆಯನ್ನು ಕಟ್ಟಿಕೊಳ್ಳುತ್ತಿದ್ದರು.

ಇವರು ಧರಿಸುತ್ತಿದ್ದ ಬಟ್ಟೆ ಕೊಳೆಯಾದ ಬಟ್ಟೆಯಾಗಿರುತ್ತಿದ್ದವು. ತಲೆಗೆ ರುಮಾಲನ್ನು ಸುತ್ತಿಕೊಳ್ಳುತ್ತಿದ್ದರು. ಜಿಡ್ಡುಜಿಡ್ಡಾದ ತಲೆಗೂದಲು, ಸ್ನಾನವನ್ನು ಕಾಣದ ಮೈ, ಕೈಗಳಿಗೆ ಕಡಗವನ್ನು ದರಿಸುತ್ತಿದ್ದರು. ಮಹಿಳೆಯರು ಸಡಿಲವಾದ ರವಿಕೆ, ಹೊಲಸಾದ, ಮಸುಕಾದ ಲಂಗವನ್ನು, ಮಲಿನವಾದಂತಹ ವಸ್ತ್ರಗಳನ್ನು ಧರಿಸುತ್ತಿದ್ದರು. ಮಹಿಳೆಯರು ಓಲೆ, ಮೂಗುತಿ, ಎರಡು ಕಿವಿಗಳ ಸುತ್ತ ಕಿವಿಯೋಲೆಗಳು, ತಾಳಿ, ಕಾಲುಂಗುರು, ಕೈಗೆ ಬಳೆಗಳು, ಕಾಲಿಗೆ ಚೈನುಗಳು, ಕೊರಳಲ್ಲಿ ಗುಂಡುಮಣಿ ಸರಗಳನ್ನು ಧರಿಸುತ್ತಿದ್ದರು. ಆದರೆ ಇಂದು ಹರಿಣಶಿಕಾರಿಗಳಲ್ಲಿ ಇಂಥ ವೇಷಭೂಷಣಗಳ ಸನ್ನಿವೇಶಗಳಲ್ಲಿ ಬದಲಾವಣೆಗಳಾಗಿವೆ. ಇಂದಿನ ಆಧುನಿಕ ಯುಗದಲ್ಲಿ ಯುವಕರಾಗಲಿ, ಹಿರಿಯರಾಗಲಿ ಪ್ಯಾಂಟು ಮತ್ತು ಷರ್ಟುಗಳನ್ನು ಧರಿಸಿರುವುದನ್ನು ಕಾಣಬಹುದು. ಅಲ್ಲದೇ ಮಹಿಳೆಯರ ಉಡುಗೆ–ತೊಡುಗೆಗಳಲ್ಲೂ ವಿಭಿನ್ನತೆಯನ್ನು ಕಾಣಬಹುದು. ಹರಿಣಶಿಕಾರಿ ಸಮುದಾಯದಲ್ಲಿ ಯುವತಿಯರು ಚೂಡಿದಾರವನ್ನು ಹಾಕಿಕೊಳ್ಳುವ ಸನ್ನಿವೇಶವನ್ನು ಇಂದು ಕಾಣಬಹುದು. ಇದೊಂದು ಸಾರ್ವತ್ರಿಕ ಉಡುಗೆಯೆಂತಲೋ ಪರಿಭಾವಿಸುತ್ತಾರೆ. ಒಂದು ಕಾಲದಲ್ಲಿ ಯುವತಿಯರು ಲಂಗವನ್ನೇ ಧರಿಸಬೇಕಾಗಿತ್ತು. ಇಂದು ಕ್ರಮೇಣ ಅನೇಕ ರಂಗದಲ್ಲಿ ತೊಡಗುತ್ತಿರುವ ಈ ಸಮುದಾಯವು ಸಹಜವಾಗಿಯೇ ಬದಲಾವಣೆಯ ಪ್ರಕ್ರಿಯೆಗೆ ಒಳಪಟ್ಟಿರುವುದು.

ಆದಿಮ ಹಂತದಲ್ಲಿ ಕಾಡು–ಮೇಡುಗಳಲ್ಲಿ ಅಲೆಯುತ್ತಿದ್ದ ಈ ಸಮುದಾಯವು ಮದುವೆಯನ್ನು ಆಯಾ ಜಾತಿಯ ವಿಭಿನ್ನ ಬೆಡಗಿನವರ ಜೊತೆಗೆ ಏರ್ಪಡುತ್ತಿದ್ದವು. ಸಮುದಾಯದಲ್ಲಿ ಅನೈತಿಕ ಸಂಬಂಧವನ್ನು ಅತೀ ತೀವ್ರವಾಗಿ ವಿರೋಧಿಸುತ್ತಿದ್ದರು. ಬ್ರಿಟೀಷರ ವಸಾಹತುಗಳಿಂದ ತಪ್ಪಿಸಿಕೊಂಡು ಹೋದ ಜನರು ಕಾಡು–ಮೇಡುಗಳಲ್ಲಿ ಅಲೆಯುತ್ತಿದ್ದರು. ಇಂಥ ಸಂಧರ್ಭದಲ್ಲಿ ಮದುವೆಯ ಆಚರಣೆಗಳು ಬೆಳಗಿನ ಹೊತ್ತಲ್ಲಿ ಮಾಡುವುದು ಕಷ್ಟಕರವಾಗಿಲ್ಲ. ಆದ್ದರಿಂದ ಈ ಸಮುದಾಯದಲ್ಲಿ ರಾತ್ರಿ ಸಂದರ್ಭದಲ್ಲಿ ವಿವಾಹವನ್ನು ಮಾಡುತ್ತಿದ್ದರು. ವಿವಾಹದ ಎಲ್ಲಾ ಆಚರಣೆಗಳು ರಾತ್ರಿಯಲ್ಲಿಯೇ ನಡೆದು ಹೋಗುತ್ತಿದ್ದವು. ಇದನ್ನೇ ಮುಂದುವರೆಸಿಕೊಂಡು ಬಂದ ಈ ಸಮುದಾಯವು ಇಂದಿಗೂ ಕೂಡಾ ರಾತ್ರಿಯಲ್ಲಿ ವಿವಾಹ ಸಂಬಂಧಗಳು ಏರ್ಪಡುವುದನ್ನು ಕಾಣಬಹುದು.

ವಿವಾಹ ವಿಚ್ಛೇದನಕ್ಕೆ ಸಂಬಂಧಿಸಿದಂತೆ ಅನೇಕ ನಿಯಮಾವಳಿಗಳಿದ್ದರೂ ಕೂಡಾ ಅದಕ್ಕೆ ಯಾವುದೇ ರೀತಿಯ ಮಾನ್ಯತೆ ದೊರೆತಿರಲಿಲ್ಲ. ಏಕೆಂದರೆ ಗಂಡು ಮತ್ತು ಹೆಣ್ಣಿನ ಸಂಬಂಧವನ್ನು ಪಾವಿತ್ರ್ಯವಾದುದೆಂದೇ ತಿಳಿದಿದ್ದರೂ, ಹೆಣ್ಣು ಗಂಡಿನ ವಿರುದ್ಧ ಯಾವುದೇ ವಿಷಯದಲ್ಲಿ ತಲೆಯಾಡಿಸುತ್ತಿರಲಿಲ್ಲ. ಗಂಡನ ಪ್ರತಿಯೊಂದು ವಾಕ್ಯವನ್ನು ವೇಧವಾಕ್ಯವೆಂದುಕೊಂಡಿದ್ದರು. ಆ ಹಂತದಲ್ಲೂ ಕೂಡಾ ಪಾವಿತ್ರ್ಯಕ್ಕೆ ಹೆಚ್ಚು ಮನ್ನಣೆಯನ್ನು ನೀಡಿದ್ದರು. ಗಂಡನನ್ನು ಬಿಟ್ಟ ಹೆಣ್ಣು ಮಕ್ಕಳನ್ನು ಅವಮಾನಿಸುವುದು, ಕೀಳಾಗಿ ಕಾಣುವಂತಹ ಪರಿಸ್ಥಿತಿಗಳಿದ್ದವು. ಆದರೆ ಇಂದಿನ ಅನೇಕ ಸಾಮಾಜಿಕ ಸಂರಚನೆಯ ಪ್ರತಿ ಹಂತದ ಬದಲಾವಣೆಯಿಂದಾಗಿ ವಿವಾಹಗಳು ವಿಚ್ಛೇಧನದ ಸ್ವರೂಪ ಕಂಡಿರುವುದನ್ನು ಕಾಣಬಹುದು. ಇಂದಿಗೂ ಕೂಡ ಇಂತಹ ವಿಷಯಗಳು ಗಣನೀಯವಾಗಿ ಕಡಿಮೆ ಸಂಖ್ಯೆಯಲ್ಲಿ ಕಂಡುಬರುವುದು.

ಮಾನವ ಸಮಾಜದ ಚರಿತ್ರೆಯುದ್ದಕ್ಕೂ ಭಾರತದಲ್ಲಿ ಅನೇಕ ರೀತಿಯ ಬದಲಾವಣೆಯ ಹಂತಗಳನ್ನು ಗಮನಿಸಬಹುದು. ಅಲೆಮಾರಿ ಬದುಕಿನ ಒಂದು ಸಮಗ್ರವಾದ ಚಿತ್ರಣವನ್ನು ನೋಡಿದಾಗ ಸಮಾಜದ ಏರಿಳಿತಗಳ ಸಂದರ್ಶನದಲ್ಲಿ ಯಾವ ರೀತಿಯ ಶೋಷಣೆಗಳಿಗೆ ಒಳಗಾಗಿವೆ ಎಂಬುದನ್ನು ತಿಳಿದುಕೊಳ್ಳಬಹುದು. ಇಂದಿನ ಆಧುನಿಕ ಯುಗದಲ್ಲೂ ಕೂಡಾ ಅವೈಜ್ಞಾನಿಕ ರೀತಿಯಲ್ಲಿಯೇ ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ. ಸಮಾಜದ ಮುಖ್ಯವಾಹಿನಿಯಿಂದ ತುಂಬಾ ದೂರ ಉಳಿದಿದ್ದಾರೆ. ಇಂತಹ ಸಮುದಾಯಗಳು ಇಂದು ನಗರೀಕರಣದ ಪ್ರಭಾವಕ್ಕೆ ಒಳಗಾದರು ಕೂಡಾ ಪೂರ್ಣ ಪ್ರಮಾಣದ ಅಭಿವೃದ್ಧಿ ಮಟ್ಟವನ್ನು ತಲುಪಲು ಸಾಧ್ಯವಾಗಿಲ್ಲ. ಹರಿಣಶಿಕಾರಿ ಸಮುದಾಯದಲ್ಲಿ ಶೈಕ್ಷಣಿಕ ಸ್ಥಾನಮಾನವನ್ನು ಗಮನಿಸಿದಾಗ ಅದು ಕೆಳಮಟ್ಟದಲ್ಲಿರುವುದು. ಒಂದು ಸಮಯದಲ್ಲಿ ಅಲೆಮಾರಿಗಳಾಗಿ ತಮ್ಮ ಕುಟುಂಬದ ನಿರ್ವಹಣೆಯ ಜವಾಬ್ದಾರಿಯೇ ಮುಖ್ಯವಾಗಿರುವ ಸಂದರ್ಭದಲ್ಲಿ ಶಿಕ್ಷಣವನ್ನು ಪಡೆದುಕೊಳ್ಳುವುದು ದೂರದ ಸಂಗತಿಯೇ. ಅಲ್ಲದೇ ಸಮಾಜದಲ್ಲಿ ಜಾತಿ ಶ್ರೇಣೀಕರಣ ಪದ್ಧತಿಯಿಂದಾಗಿ ಮೇಲ್ವರ್ಗದ ಜನರಿಂದ ಕೆಳವರ್ಗದ ಶೋಷಣೆ ನಿರಂತರವಾಗಿ ನಡೆಯುತ್ತಿತ್ತು. ಶಿಕ್ಷಣವನ್ನು ಕೇವಲ ಮೇಲ್ವರ್ಗದ ಜನರಿಗೆ ಮಾತ್ರ ಮೀಸಲು ಎಂಬ ಧೋರಣೆಯನ್ನು ಹೊಂದಿದ್ದವು. "ಭಾರತದ ಶ್ರೇಣೀಕರಣ ಜಗತ್ತಿನ ಎಲ್ಲ ತಾರತಮ್ಯ ವ್ಯವಸ್ಥೆಗಳಿಗಿಂತ ಹೆಚ್ಚು ಸಂಕೀರ್ಣ ಮತ್ತು ಅಷ್ಟೇ ಕ್ರೂರ ವ್ಯವಸ್ಥೆ"ಯಾಗಿತ್ತು[೨] ಇದಲ್ಲದೇ ಅನೇಕ ಸಮುದಾಯಗಳಿಗೆ ಅಪರಾಧಿ ಬುಡಕಟ್ಟು ಎಂಬ ಹಣೆಪಟ್ಟಿ ಕಟ್ಟುವುದರ ಮೂಲಕ ಅವರನ್ನು ಬ್ರಿಟೀಷ್ ವಸಾಹತುಗಳಲ್ಲಿ ಇಡಲಾಯಿತು. ವಸಾಹತುಗಳಲ್ಲಿ ಜನರಿಂದ ಅನೇಕ ರೀತಿಯ ಕೆಲಸಗಳಲ್ಲಿ ದುಡಿಯಲು ಕರೆದುಕೊಂಡು ಹೋಗಿ ಮತ್ತೆ ವಸಾಹತುಗಳಲ್ಲಿ ಬಿಡಲಾಗುತ್ತಿತ್ತು. ಬ್ರಿಟೀಷ್ ಆಳ್ವಿಕೆಯ ಸಂದರ್ಭದಲ್ಲಿ ಹರಿಣಶಿಕಾರಿ ಸಮುದಾಯದ ಮಕ್ಕಳನ್ನು ಶಾಲೆಗೆ ಸೇರಿಸುವಂತೆ ಒತ್ತಾಯ ಮಾಡಿತು.

ಇದೇ ಶೈಕ್ಷಣಿಕ ವಲಂಯದ ಪ್ರವೇಶಕ್ಕೆ ಮೊದಲ ಘಟ್ಟವಾಗಿತ್ತು. ಇಂದಿನ ಹರಿಣಶಿಕಾರಿಸಮುದಾಯದ ಜನರು ನಗರೀಕರಣದ ಪ್ರಭಾವಕ್ಕೆ ಒಳಗಾಗಿ ಅನೇಕ ರೀತಿಯ ಅಭಿವೃದ್ಧಿಯ ಹಂತವನ್ನು ತಲುಪಲು ಪ್ರಯತ್ನಿಸುತ್ತಿದ್ದಾರೆ. ಹರಿಣಶಿಕಾರಿ ಸಮುದಾಯದಲ್ಲಿ ಶಿಕ್ಷಣವನ್ನು ಪಡೆದುಕೊಂಡ ಜನರು ಕೇವಲ ಕೆಲವರು ಮಾತ್ರ. ಆದರೆ ಅವರ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸುವಂತಹ ಕ್ರಿಯೆಯನ್ನು ಇಂದು ಕಾಣಬಹುದು. ಹರಿಣಶಿಕಾರಿ ಸಮುದಾಯದಲ್ಲಿ ಮಹಿಳೆಯರು ಕುಟುಂಬದ ಚೌಕಟ್ಟನ್ನು ಮೀರಿ ಹೋಗದಂತೆ ಕಟ್ಟುಪಾಡುಗಳನ್ನು ನಿರ್ಮಿಸಿದರೂ ಕೂಡ ಇಂದು ಅನೇಕ ಹೆಣ್ಣುಮಕ್ಕಳು ಶಿಕ್ಷಣವನ್ನು ಪಡೆದುಕೊಳ್ಳುತ್ತಿದ್ದಾರೆ. ಆದರೆ ಉನ್ನತ ಮಟ್ಟದ ಶಿಕ್ಷಣವನ್ನು ಕೊಡಿಸುವಲ್ಲಿ ಹಿಂದೇಟು ಹಾಕುತ್ತಿದ್ದಾರೆ. ಇದಕ್ಕೆ ಮುಖ್ಯವಾದ ಕಾರಣವೇನೆಂದರೆ ಹೆಣ್ಣುಮಕ್ಕಳು ಋತುಮತಿಯಾದ ತಕ್ಷಣ ಮದುವೆಯ ಪ್ರಸ್ತಾಪವು ಬಂದೊದಗುವುದರಿಂದ ಹೆಣ್ಣುಮಕ್ಕಳ ಶಿಕ್ಷಣ ಪ್ರಗತಿಯು ಕುಂಠಿತಗೊಳ್ಳುತ್ತಿರುವುದು.

ಹರಿಣಶಿಕಾರಿ ಸಮುದಾಯದಲ್ಲಿ ಮೊದಲಿನಿಂದಲೂ ಹೆಣ್ಣುಮಕ್ಕಳಿಗೆ ಕುಟುಂಬದ ಜವಾಬ್ದಾರಿಗಳನ್ನು ಹೇಗೆ ನಿಭಾಯಿಸಬೇಕು? ಕುಟುಂಬದಲ್ಲಿ ಅವರ ಕರ್ತವ್ಯಗಳೇನು? ಎಂಬುದನ್ನು

ರೂಢಿಗತ ಪಾತ್ರ ಮಾದರಿಗಳನ್ನು ನೀಡುವುದರ ಮೂಲಕ ಅವರನ್ನು ಖಾಸಗಿ ವಲಯಕ್ಕೆ ಸೀಮಿತಗೊಳಿಸಲಾಗಿದೆ. ಹರಿಣಶಿಕಾರಿ ಸಮುದಾಯದಲ್ಲಿ ಹೆಣ್ಣು ಋತುಮತಿಯಾದ ತಕ್ಷಣ ಅವಳನ್ನು ಮದುವೆ ಮಾಡಿಕೊಡುವ ಸಂಪ್ರದಾಯ ಆಚರಣೆಗಳಿದ್ದವು. ಆದ್ದರಿಂದ ಈ ಸಮುದಾಯದಲ್ಲಿ ಬಾಲ್ಯ ವಿವಾಹಗಳು ಹೆಚ್ಚು ಕಂಡುಬರುವುದು. ಆದರೆ ಇಂದಿನ ಪರಿಸ್ಥಿತಿಯಲ್ಲಿ ಸ್ವಲ್ಪ ಮಟ್ಟಿನ ಬದಲಾವಣೆ ಕಂಡುಬಂದರೂ ಕೂಡಾ ಬಾಲ್ಯವಿವಾಹವು ಕಡಿಮೆ ಸಂಖ್ಯೆಯಲ್ಲಿ ಜರುಗುತ್ತಿವೆ ಮತ್ತು ಹೆಣ್ಣು ಮಕ್ಕಳ ವಿವಾಹದ ವಯಸ್ಸಿನಲ್ಲೂ ಕೂಡಾ ಏರಿಕೆ ಕಂಡುಬಂದಿರುವುದು.

ಸಾಮಾಜಿಕ ಸಂದರ್ಭದಲ್ಲಿ ಅನೇಕ ರೀತಿಯ ಬದಲಾವಣೆಗಳು ಕಂಡುಬಂದರೆ ಆರ್ಥಿಕ ಪರಿಸ್ಥಿತಿಯಲ್ಲೂ ಸ್ಥಿತ್ಯಂತರಗಳ ಗುಣಗಳು ಕಂಡುಬರುವುದು. ಅಲೆಮಾರಿಗಳಾದ ಅನೇಕ ಸಮುದಾಯಗಳು ಸಮಾಜದ ಅನೇಕ ಬದಲಾವಣೆಯ ಕ್ರಿಯೆಗೆ ಒಳಗಾಗಿ ತಮ್ಮ ಮೂಲ ಕಸುಬನ್ನು ಕಳೆದುಕೊಳ್ಳುವಂತಾಯಿತು. ಸಮುದಾಯಗಳ ಮುಖ್ಯ ಆರ್ಥಿಕ ಮೂಲ ಅವರ ಕುಲ ಕಸುಬಗಳಾಗಿದ್ದವು. ಪಾರಂಪರಿಕವಾಗಿ ಬೆಳೆಸಿಕೊಂಡ ಅನೇಕ ಕುಶಲತೆಗಳು ಆಧುನಿಕತೆಯ ಪ್ರವಾಹಕ್ಕೆ ಸಿಲುಕಿ ತಮ್ಮ ಪ್ರಾಶಸ್ತ್ಯವನ್ನೇ ಕಳೆದುಕೊಂಡಿರುವುದು. ಭಾರತದಲ್ಲಿ ಬ್ರಿಟೀಷರ ಆಗಮನದಿಂದ ಅನೇಕ ವಸಾಹತುಗಳು ನಿರ್ಮಾಣವಾದವು ಅವು ಅಲೆಮಾರಿ ಸಮುದಾಯಗಳಿಗೆ ಒಂದು ಬಂದಿಖಾನೆಯಾಗಿಯೇ ಪರಿಣಮಿಸಿದವು. ಈ ಸಮಯದಲ್ಲಿ ಬಂದ ಜಮೀನ್ದಾರಿ ಪದ್ಧತಿ ಮತ್ತು ಊಳಿಗಮಾನ್ಯ ಪದ್ಧತಿಯಿಂದಾಗಿ ಅನೇಕ ಸಮುದಾಯಗಳು ತಮ್ಮ ಜಮೀನನ್ನು ಕಳೆದುಕೊಳ್ಳುವಂತಾಯಿತು. ಮತ್ತು ಆರ್ಥಿಕತೆಯಲ್ಲಿ ಕುಸಿತವನ್ನು ಕಂಡು ಅತಂತ್ರ ಸ್ಥಿತಿಗೆ ತಲುಪುವಂತಾಯಿತು.

ಎ.ಎಸ್.ಪ್ರಭಾಕರ ಅವರ ಪ್ರಕಾರ "ಅಲೆಮಾರಿಗಳ ಆರ್ಥಿಕ ಮೂಲಗಳು ಮತ್ತು ಅವು ಬೆಳೆದು ಬರಲು ಕಾರಣವಾದ ಚಾರಿತ್ರಿಕ ಅನಿವಾರ್ಯತೆಯನ್ನು ಗಮನದಲ್ಲಿಟ್ಟುಕೊಂಡು ಅಲೆಮಾರಿಗಳನ್ನು ಐದು ಭಾಗಗಳಾಗಿ ವಿಂಗಡಿಸಿದ್ದಾರೆ.

೧. ಪ್ರಾದರ್ಶಕ ಕಲೆಗಳನ್ನು ಅವಲಂಬಿಸಿರುವ ಸಮುದಾಯಗಳು

೨. ಕರಕುಶಲ ಕಲೆಗಳನ್ನು ಅವಲಂಬಿಸಿರುವ ಸಮುದಾಯಗಳು

೩. ಧಾರ್ಮಿಕ ಸಂಬಂಧೀ ವೃತ್ತಿಗಳನ್ನು ಅವಲಂಬಿಸಿರುವವರು

೪. ಪಾರಂಪರಿಕ ಮೂಲ ವೃತ್ತಿಗಳಲ್ಲೇ ಇರುವ ಸಮುದಾಯಗಳು

೫. ಬೇಟೆ, ಪಶುಪಾಲನೆ ಮತ್ತು ಆಹಾರ ಸಂಗ್ರಹಣೆ ಮೂಲ ಕಸುಬುಗಳನ್ನು ಇನ್ನೂ ಅವಲಂಬಿಸಿರುವವರು[೩]

ಹರಿಣಶಿಕಾರಿ ಸಮುದಾಯವು ಬೇಟೆಯನ್ನೇ ಮುಖ್ಯ ಕಸುಬನ್ನಾಗಿ ಮಾಡಿಕೊಂಡರು. ಪ್ರಾಣಿಗಳ ಚರ್ಮವನ್ನು ಮಾರಿ ತಮ್ಮ ಆರ್ಥಿಕ ಬದುಕನ್ನು ನಿರ್ವಹಿಸುತ್ತಿದ್ದರು. ಆದರೆ ನಂತರದ

ಕಾಲಘಟ್ಟದಲ್ಲಿ ಬಂಡವಾಳಶಾಹಿಗಳ ಆಗಮನದಿಂದ ಅನೇಕ ಕುಲಕಸುಬು ಆಧಾರಿತ ವಸ್ತುಗಳು ತಮ್ಮ ಮೌಲ್ಯವನ್ನು ಕಳೆದುಕೊಂಡವು. ಆಗ ಆ ಸಮುದಾಯವು ಮತ್ತೆ ಅತಂತ್ರ ಸ್ಥಿತಿಗೆ ತಲುಪುವಂತಾಯಿತು. ಹೀಗೆ ಮುಂದೆ ತಮ್ಮ ಜೀವನದ ಉಳಿವಿಗಾಗಿ ಹರಿಣಶಿಕಾರಿ ಸಮುದಾಯವು ಆಯ್ಕೆ ಮಾಡಿಕೊಂಡ ವೃತ್ತಿ ಏನೆಂದರೆ ಕಳ್ಳಬಟ್ಟಿ ಸರಾಯಿ ಮಾಡುವುದು. ಕಳ್ಳಬಟ್ಟಿ ಸರಾಯಿ ತಯಾರಿಕೆಯಲ್ಲಿ ತುಂಬಾ ಪ್ರವೀಣತೆಯನ್ನು ಪಡೆದುಕೊಂಡರು ಈ ವೃತ್ತಿಯನ್ನು ಇಂದಿಗೂ ಕೂಡ ಮುಂದುವರಿಸಿಕೊಂಡು ಬಂದಿದ್ದಾರೆ. ಹರಿಣಶಿಕಾರಿ ಸಮುದಾಯದಲ್ಲಾದ ಸಾಂಸ್ಕೃತಿಕ ಪಲ್ಲಟದ ಕಾರಣದಿಂದಾಗಿ ಅನೇಕ ಜನರು ಶಿಕ್ಷಣವನ್ನು ಪಡೆದುಕೊಂಡು ಅನೇಕ ಹುದ್ದೆಗಳಲ್ಲಿ ತೊಡಗಿರುವುದನ್ನು ಇಂದು ಕಾಣಬಹುದು.

## ಧಾರ್ಮಿಕ ಪಲ್ಲಟ

ಪ್ರತಿಯೊಂದು ಬುಡಕಟ್ಟು ಸಮುದಾಯವು ತಮ್ಮದೇ ಆದ ವಿಭಿನ್ನವಾದ ಧಾರ್ಮಿಕ ಆಚರಣೆಯನ್ನು ಹೊಂದಿರುವವು. ಆಯಾ ಸಮುದಾಯದ ಸಾಂಸ್ಕೃತಿಕ ಆಚಾರ ವಿಚಾರಗಳು ವಿಭಿನ್ನವಾದ ಗುಣಸ್ವಭಾವನ್ನು ಹೊಂದಿರುವುದು. ಹರಿಣಶಿಕಾರಿ ಸಮುದಾಯವೂ ಕೂಡಾ ತಮ್ಮದೇ ಆದಂತಹ ಸಾಂಪ್ರದಾಯಿಕ ಕಟ್ಟುಪಾಡುಗಳನ್ನು ರೂಪಿಸಿಕೊಂಡು ಬಂದಿರುವವು. ಇವರಲ್ಲಿ ಧಾರ್ಮಿಕ ರೀತಿ, ನಿಯಮಾವಳಿಗಳನ್ನು ತುಂಬಾ ಕಟ್ಟುನಿಟ್ಟಾಗಿ ಪಾಲಿಸುವರು. ಹರಿಣಶಿಕಾರಿ ಸಮುದಾಯದಲ್ಲಿ ದೇವತಾರಾಧನೆಗೆ ಮಡಿ–ಮೈಲಿಗೆ, ಸೂತಕದಂತಹ ಆಚರಣೆಯನ್ನು ಸ್ವಲ್ಪವೂ ಚಾಚೂ ತಪ್ಪದೇ ಮಾಡುವರು. ಇವರಲ್ಲಿಯ ಒಂದು ನಂಬಿಕೆಯ ಪ್ರಕಾರ ದೈವದ ಕಾರ್ಯದಲ್ಲಿ ಏನಾದರೂ ಅಡೆತಡೆಗಳಾದರೆ ಅದು ಸಮುದಾಯದ ಅವನತಿಗೆ ಕಾರಣವಾಗುವುದು ಎಂಬ ಮನೋಧೋರಣೆಯನ್ನು ಹೊಂದಿದವರಾಗಿದ್ದಾರೆ. ಈ ಸಮುದಾಯದ ಧಾರ್ಮಿಕ ಆಚರಣೆಗಳು ತುಂಬಾ ವಿಶಿಷ್ಟತೆಯಿಂದ ಕೂಡಿವೆ. ಆದಿಯ ಕಾಲಘಟ್ಟದಲ್ಲಿ ಅಲೆಮಾರಿ ಜೀವನ ಸಾಗಿಸುತ್ತಿದ್ದ ಸಂದರ್ಭದಲ್ಲಿ ಅರಣ್ಯಗಳಿಂದ ಆಶ್ರಯವನ್ನು ಪಡೆದುಕೊಂಡನು. ಹೀಗೆ ಪಾಲನೆ ಮತ್ತು ಪೋಷಣೆ ಸ್ವಭಾವವನ್ನು ಹೊಂದಿರುವ ಪ್ರಕೃತಿ ಮತ್ತು ಮಹಿಳೆಯನ್ನು ಸಮೀಕರಣದ ದೃಷ್ಟಿಯಿಂದಲೇ ನೋಡಿಕೊಳ್ಳುತ್ತಿದ್ದರು. ಆದ್ದರಿಂದ ಈ ಸಮುದಾಯದವರ ದೇವರ ಆಚರಣೆಯಲ್ಲಿ ಮಹಿಳಾ ದೇವತೆಯನ್ನು ಮುಖ್ಯವಾಗಿ ಆರಾಧಿಸುತ್ತಾರೆ. ಇಂತಹ ದೈವದ ಆರಾಧನೆಯಲ್ಲಿ ಮಹಿಳೆಯರು ಪಾಲ್ಗೊಳ್ಳದಂತೆ ಮಡಿ–ಮೈಲಿಗೆಯಂತಹ ಆಚರಣೆಗಳು ನಿರ್ಬಂಧವನ್ನು ಏರಿವೆ. ಕೆಲವೊಂದು ತಮ್ಮದೇ ಆದ ವಿಶಿಷ್ಟವಾದ ಕಟ್ಟುಪಾಡುಗಳನ್ನು ರಚಿಸಿಕೊಂಡು ಧಾರ್ಮಿಕ ಕ್ರಿಯೆಯಲ್ಲಿ ತೊಡಗುತ್ತಿದ್ದರು. ಇದಕ್ಕೆ ಅನುಸಾರವಾಗಿ ಅನೇಕ ಜಾತ್ರಾ ಉತ್ಸವಗಳನ್ನು, ಹಬ್ಬ–ಹರಿದಿನಗಳ ಆಚರಣೆಗಳನ್ನು ಕೈಗೊಳ್ಳುತ್ತಿದ್ದಾರೆ. ಆದರೆ ಕ್ರಮೇಣ ಸಾಂಸ್ಕೃತಿಕ ವಿಚಾರಗಳ ನಿರಂತರ ಬದಲಾವಣೆ ಕ್ರಿಯೆಯಿಂದ ನಗರದ ಸಂಪರ್ಕಕ್ಕೆ ಬಂದ ಈ ಸಮುದಾಯವು ಕೆಲವೊಂದು ಬೇರೆ ಆಚರಣೆಗಳನ್ನು ಅನುಸರಿಸಿ ಸ್ವೀಕರಿಸುತ್ತಿವೆ.

ಮಹಿಳೆಯರು ಗರ್ಭಿಣಿಯಾದಾಗ ಸಮುದಾಯದಲ್ಲಿ ಯಾವುದೇ ರೀತಿಯ ಆಚರಣೆಗಳು ಮೊದಲು ಕಂಡುಬರುತ್ತಿರಲಿಲ್ಲ. ಆದರೆ ಈಗಿನ ಸಂದರ್ಭದಲ್ಲಿ ಸೀಮಂತದ ಕಾರ್ಯಾಚರಣೆಗಳು ಕಂಡುಬರುತ್ತವೆ. ಮದುವೆಯ ಸಂದರ್ಭದಲ್ಲೂ ಕೂಡ ಅನೇಕ ಆಚರಣೆಗಳನ್ನು, ನಿಯಮಗಳನ್ನು ಈ ಸಮಾಜವು ಹೊಂದಿರುವುದನ್ನು ಕಾಣಬಹುದು. ಆದರೆ ಇಂಥ ಆಚರಣೆಗಳಲ್ಲಿ ಕಟ್ಟುನಿಟ್ಟಾದ ನಿಯಮಾವಳಿಗಳಲ್ಲಿ ಇಂದು ಸಡಿಲತೆಯನ್ನು ಕಾಣಬಹುದು.

ವ್ರತಾಚಾರಣೆಗಳ ಸಂದರ್ಭದಲ್ಲಿ ಕೂಡಾ ಅನೇಕ ರೀತಿಯ ನಿಯಮಾವಳಿಗಳನ್ನು ಮಹಿಳೆಯರು ತುಂಬಾ ಕಟ್ಟುನಿಟ್ಟಾಗಿ ಪರಿಪಾಲಸಿಕೊಂಡು ಬರುತ್ತಿದ್ದರು. ಅಂತಹ ದೈವಾಚರಣೆಗಳ ಸಂಖ್ಯೆಯಲ್ಲಿ ಇಂದು ಹೆಚ್ಚಳ ಕಂಡುಬಂದಿರುವುದು. ಆಧುನಿಕ ಜಗತ್ತಿನ ನಾಗರೀಕರಣದ ಪ್ರಭಾವದಿಂದಾಗಿ ಅವರದ್ದಲ್ಲದ ಕೆಲವೊಂದು ಆಚರಣೆಗಳನ್ನು ಕೈಬಿಟ್ಟಿದ್ದರೆ ಇನ್ನೂ ಕೆಲವು ಆಚರಣಾ ಪದ್ಧತಿಗಳನ್ನು ಬೇರೆ ಧರ್ಮಗಳ ಮೂಲಕ ಸ್ವೀಕರಿಸಿಕೊಂಡು ಅನುಕರಣೆಯನ್ನು ಮಾಡುತ್ತಿದ್ದಾರೆ. ಹೀಗೆ ಧಾರ್ಮಿಕ ನೀತಿಗಳ ಅನುಕರಣೆಯಲ್ಲಿಯೇ ಅನೇಕ ರೀತಿಯ ಸಾಂಸ್ಕೃತಿಕ ಪಲ್ಲಟಗಳನ್ನು ಕಾಣುತ್ತೇವೆ.

## ರಾಜಕೀಯ ಪಲ್ಲಟ

ಬುಡಕಟ್ಟು ಸಮುದಾಯಗಳು ಅಧಿಕವಾಗಿ ಕಾಡು-ಮೇಡು, ನದಿ ಕಣಿವೆ ಪ್ರದೇಶ, ದುರ್ಗಮ ಪ್ರದೇಶಗಳಲ್ಲಿ ವಾಸಿಸುತ್ತಿದ್ದವರು ಒಂದು ಹಂತದಲ್ಲಿ ನಾಗರೀಕ ಸಮಾಜದಿಂದ ದೂರ ಉಳಿದಿದ್ದ ಜನರು ತಮ್ಮದೇ ಆದಂತಹ ಪ್ರತ್ಯೇಕವಾದ ನ್ಯಾಯ ವ್ಯವಸ್ಥೆಯನ್ನು ಹೊಂದಿದ್ದರು. ಹರಿಣಶಿಕಾರಿ ಸಮುದಾಯದಲ್ಲೂ ಪ್ರತ್ಯೇಕ ಸಮುದಾಯದ ನ್ಯಾಯ ವ್ಯವಸ್ಥೆಯು ಕಂಡುಬರುವುದು. ಈ ರೀತಿಯ ನ್ಯಾಯ ವ್ಯವಸ್ಥೆಯು ಒಂದು ಅಚ್ಚುಕಟ್ಟಾದ ನೀತಿ-ನಿಯಮಾವಳಿಗಳನ್ನು ಹೊಂದಿರುವುದು. ತಮ್ಮದೇ ಆದಂತಹ ರೀತಿಯಲ್ಲಿ ಅಪರಾದಕ್ಕೆ ಶಿಕ್ಷೆಯನ್ನು ನೀಡುವ ಪದ್ಧತಿಯನ್ನು ರೂಪಿಸಿಕೊಂಡು ಬಂದಿದ್ದರೂ ಇವರಲ್ಲಿ ಕೇವಲ ಒಳ ಆಡಳಿತ ವ್ಯವಸ್ಥೆ ಕಂಡುಬರುವುದು. ಸಮುದಾಯದ ರಾಜಕೀಯ ವ್ಯವಸ್ಥೆ ಇಷ್ಟಕ್ಕೇ ಮಾತ್ರ ಸೀಮಿತವಾಗಿರುವುದನ್ನು ಕಾಣಬಹುದು. ಇಂದಿನ ರಾಜಕೀಯ ವಲಯವಾದ ಪಂಚಾಯತ್‌ರಾಜ್, ಲೋಕಸಭಾ, ರಾಜ್ಯಸಭೆಗಳಲ್ಲಿ ಇವರ ಭಾಗವಹಿಸುವಿಕೆಯನ್ನು ನೋಡಿದಾಗ ಅಲ್ಲಿ ಗಣನೀಯ ಪ್ರಮಾಣದಲ್ಲಿ ಇರುವುದು. ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಈ ಸಮುದಾಯದ ಜನರ ಭಾಗವಹಿಸುವಿಕೆಯ ಪ್ರಮಾಣವನ್ನು ನೋಡಬಹುದು. ಅದು ತುಂಬಾ ಸೀಮಿತವಾಗಿದೆ. ರಾಜಕೀಯ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುವಲ್ಲಿ ಅಷ್ಟೊಂದು ಪ್ರೋತ್ಸಾಹ ಬೆಂಬಲ ಇರುವುದಿಲ್ಲ. ಏಕೆಂದರೆ ಯಾವುದೇ ಒಂದು ಪಕ್ಷ ಗೆಲ್ಲಬೇಕಾದರೆ ಜನರ ಬೆಂಬಲವೂ ಬೇಕಾಗಿರುವುದು. ಈ ಸಮುದಾಯದ ಜನರು ಹೊರಜಗತ್ತಿನೊಂದಿಗೆ ಕಡಿಮೆ ವ್ಯವಹಾರವನ್ನು ಹೊಂದಿದ್ದು, ಬೇರೆ ಜನರೊಂದಿಗೆ ಬೆರೆತುಕೊಳ್ಳುವ ಅಂಶವನ್ನು ಕಾಣುವುದಿಲ್ಲ. ಆದರೂ ಕೂಡ ಮೊದಲ ಕೇವಲ ಒಳ ಆಡಳಿತ ವ್ಯವಸ್ಥೆಯಲ್ಲಿ ಮಾತ್ರ ರಾಜಕೀಯತೆಯನ್ನು ಹೊಂದಿದ್ದರು. ಇಂದು ನಗರದ

ಹಂತದವರೆಗೂ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಕಂಡುಬರುತ್ತಿದ್ದಾರೆ. ಹೀಗೆ ಪ್ರತೀ ಹಂತದಲ್ಲಾಗುವ ಅನೇಕ ರಾಜಕೀಯ ತಿರುವುಗಳನ್ನು ಗಮನಿಸಬಹುದು. ರಾಜಕೀಯದಲ್ಲಿ ಹರಿಣಶಿಕಾರಿ ಸಮುದಾಯದ ಪ್ರವೇಶವೂ ಒಂದು ಪ್ರಮುಖವಾದ ಸಂಗತಿಯಾಗಿದೆ.

ಹೀಗೆ ಪ್ರತಿಯೊಂದು ಹಂತದಲ್ಲಿ ಸಂಸ್ಕೃತಿ ನೆಲೆಯಲ್ಲಿ ಸಾಮಾಜೋ-ಆರ್ಥಿಕ, ಧಾರ್ಮಿಕ, ರಾಜಕೀಯ ಪಲ್ಲಟಗಳನ್ನು ಗುರುತಿಸಬಹುದು. ಇಂಥಹ ಪಲ್ಲಟಗಳು ಒಂದೆಡೆ ಸಾಂಪ್ರದಾಯಿಕ ಅವತಾರಗಳನ್ನು ಮರೆಮಾಚಿದಂತೆ ಮಾಡಿದರೇ ಇನ್ನೊಂದೆಡೆ ಸಮುದಾಯದ ಅಭಿವೃದ್ಧಿಗೆ ಪೂರಕವಾದ ಕೆಲಸವನ್ನು ಮಾಡುತ್ತಿವೆ.

**ಅಡಿ ಟಿಪ್ಪಣಿ**

೧. ಬೆಟಗೇರಿ ಪ್ರಹ್ಲಾದ; ಅಡವಿ ಬೆಂಚರ ಸಂಸ್ಕೃತಿ; ಪು.ಸಂ. ೯
೨. ಸ.ಚಿ. ರಮೇಶ; ಅಲೆಮಾರಿಗಳ ಸ್ಥಿತಿಗತಿ; ಪು.ಸಂ. ೮೭
೩. ಅದೇ, ಪು.ಸಂ. ೯೩

ಪ್ರಸ್ತುತ ಅಧ್ಯಯನವು ಹರಿಣಶಿಕಾರಿ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ. ಹರಿಣಶಿಕಾರಿ ಮಹಿಳೆಯರ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ ಸ್ಥಾನಮಾನಗಳಲ್ಲಿ ಮಹಿಳೆಯ ಪಾತ್ರವೇನು ಎಂಬುದನ್ನು ತಿಳಿಯಲಾಗುವುದು. ಹರಿಣಶಿಕಾರಿ ಸಮುದಾಯವು ಒಂದು ಬುಡಕಟ್ಟು ಸಮುದಾಯವಾಗಿದ್ದು, ಸಮಾಜ ಶಾಸ್ತ್ರೀಯ ನೆಲೆಯಿಂದಲೇ ಈ ವಿಷಯದ ಬಗ್ಗೆ ಸ್ಥೂಲವಾದ ಸಂಶೋಧನೆಗಳು ಕಂಡುಬಂದಿರುವುದು. ಆದರೆ ಇಂತಹ ಸಮಾಜ ಶಾಸ್ತ್ರೀಯ ಅಥವಾ ಸಾಮಾನ್ಯ ಅಧ್ಯಯನಗಳಲ್ಲಿ ದೇಶದ ಅರ್ಧದಷ್ಟಿರುವ ಮಹಿಳೆಯರ ಕೊಡುಗೆಗಳನ್ನೇ ಗೌಣ್ಯಗೊಳಿಸಲಾಗಿರುವುದು ಅಧ್ಯಯನಕ್ಕೆ ಸಂಬಂಧಿಸಿದ ಪ್ರತಿಯೊಂದು ವಿಷಯವೂ ಪುರುಷವಾಚಿ ಮೌಲ್ಯಗಳಿಂದಲೇ ರೂಪಿತಗೊಂಡಿದ್ದು, ಅಲ್ಲಿ ಮಹಿಳಾ ಪರ ಕಾಳಜಿಯಾಗಲೀ ಮಹಿಳಾ ಪರ ವಿಷಯವಾಗಲಿ ಪ್ರತಿಬಿಂಬಿತವಾಗಿರುವುದಿಲ್ಲ. ಪ್ರತಿಯೊಂದು ಶಿಸ್ತಿನಲ್ಲೂ ಮಹಿಳೆಯರ ಪ್ರಮುಖ ಕೊಡುಗೆಗಳೇನು ಎಂಬುದನ್ನು ಗುರುತಿಸಿ ಮಹಿಳಾ ದೃಷ್ಟಿಕೋನದಿಂದ ವಿಷಯವನ್ನು ಪುನರ್‌ಸ್ಥಾಪಿಸುವುದು ಮುಖ್ಯವಾಗಿರುವುದು. ಸಮಾಜದಲ್ಲಿ ಮಹಿಳೆಯರನ್ನು ಎರಡನೆಯ ದರ್ಜೆಯ ಪ್ರಜೆಯಾಗಿ ಸ್ವೀಕೃತವಾಗಿರುವಳು. ಭಾರತದಂತಹ ಪುರುಷ ಪ್ರಧಾನ ಸಮಾಜದಲ್ಲಿ ಒಂದೆಡೆ ಮಹಿಳೆಯರು ಅನೇಕ ರೀತಿಯ ಶೋಷಣೆಗಳಿಗೆ ದಬ್ಬಾಳಿಕೆಗೆ ಒಳಗಾಗಿರುವಳು. ಇನ್ನೊಂದೆಡೆ ವರ್ಗಶ್ರೇಣೀಕರಣದ ದೃಷ್ಟಿಯಿಂದ ಕೆಳವರ್ಗದ ಮಹಿಳೆಯರು, ಮೇಲ್ವರ್ಗದ ಪುರುಷರಿಂದ ಮತ್ತು ಕುಟುಂಬದ ಪುರುಷರಿಂದಲೂ ಶೋಷಣೆಗೆ ಒಳಗಾಗುವಳು. ಸಾಮಾಜಿಕ ಸಂರಚನೆಯಲ್ಲಿ ಈ ವ್ಯವಸ್ಥೆಯನ್ನು ಅಂತರ್ಗತಗೊಳಿಸಿಕೊಂಡಿರುವುದು ಆದ್ದರಿಂದ ಪ್ರತ್ಯೇಕವಾಗಿ ಮಹಿಳೆಯರ ಬಗ್ಗೆ ಅಧ್ಯಯನ ಕೈಗೊಳ್ಳುವುದು ಮುಖ್ಯವಾಗಿದೆ. ಸಮಾಜದ ಮುಖ್ಯವಾಹಿನಿಯಲ್ಲಿರುವ ಮಹಿಳೆಯರಿಗಿಂತ ಭಿನ್ನವಾದ ಸಮಸ್ಯೆಯನ್ನು ಎದುರಿಸುವ ಬುಡಕಟ್ಟು ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ತಿಳಿದುಕೊಳ್ಳುವುದು ಮುಖ್ಯವಾಗಿದೆ. ಆದ್ದರಿಂದ ಬುಡಕಟ್ಟು ಸಮುದಾಯಗಳಲ್ಲಿ ಒಂದಾದ ಹರಿಣಶಿಕಾರಿ ಸಮುದಾಯದ ಮಹಿಳೆಯರ ಬದುಕಿನ ಸ್ಥೂಲವಾದ ಚಿತ್ರಣವನ್ನು ಗ್ರಹಿಸಲು ಈ ಅಧ್ಯಯನದ ಮೂಲಕ ಪ್ರಯತ್ನಿಸಲಾಗಿದೆ.

ಹರಿಣಶಿಕಾರಿ ಸಮುದಾಯದವರು ಕರ್ನಾಟಕದ ಎಲ್ಲೆಡೆ ಹರಡಿಕೊಂಡಿದ್ದಾರೆ. ಈ ಸಮುದಾಯದ ಜನಾಂಗವನ್ನು ಪ್ರಾದೇಶಿಕ ವ್ಯತ್ಯಾಸದ ಹಿನ್ನೆಲೆಯಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಇಂತಹ ಹರಿಣಶಿಕಾರಿ ಸಮುದಾಯವು ಒಂದೆಡೆ ಕಾಡುಗಳಲ್ಲಿ ಅಲೆಮಾರಿಗಳಾಗಿ ಜೀವನವನ್ನು ಸಾಗಿಸುತ್ತಿದ್ದರೆ ಇನ್ನೊಂದೆಡೆ ನಗರಗಳಲ್ಲಿ ವಾಸಿಸುವ ಜನರಿದ್ದಾರೆ. ಬ್ರಿಟೀಷರ

ಆಡಳಿತ ವ್ಯವಸ್ಥೆಯಲ್ಲಿ ಜಾರಿಗೆ ಬಂದ ಬುಡಕಟ್ಟು ಅಪರಾಧಿ ಅಧಿನಿಯಮದಲ್ಲಿ ಹರಿಣಶಿಕಾರಿ ಸಮುದಾಯದವರನ್ನು ಕಳ್ಳರು, ಮೋಸಗಾರರು, ಕೊಲೆಗಾರರೆಂಬ ಹಣೆಪಟ್ಟಿ ಕಟ್ಟಿ ಅವರನ್ನು ವಸಾಹತುಗಳಲ್ಲಿ ಕೂಡಿ ಹಾಕಲಾಯಿತು. ಸ್ವತಂತ್ರ ನಂತರ ಈ ವಸಾಹತುಗಳು ಮುಕ್ತಗೊಳ್ಳುವುದರ ಮೂಲಕ ಜನರು ಬೇರೆ ಬೇರೆ ಪ್ರದೇಶದ ಕಡೆಗೆ ಚದುರಿ ಹೋದರು. ಇಂತಹ ವಸಾಹತುಗಳು ಈಗ ನಗರದ ವಲಯಗಳಲ್ಲಿ ಸ್ಥಾಪಿತಗೊಂಡಿವೆ. ಆದರೂ ಕೂಡ ಈ ಸಮುದಾಯದ ಜನರು ಸಮಾಜದ ಸಂಪರ್ಕಕ್ಕೆ ಬರಲು ಇಷ್ಟಪಡುವುದಿಲ್ಲ. ಇದಕ್ಕೆ ಮುಖ್ಯವಾದ ಕಾರಣವೇನೆಂದರೆ ಈಗಲೂ ಸಮಾಜದಲ್ಲಿ ಅವರನ್ನು ಅಪರಾಧಿ ನೆಲೆಯಿಂದಲೇ ಗುರುತಿಸುತ್ತಾರೆ. ಅನಿಶ್ಚತತೆ, ಅನಿವಾರ್ಯತೆಯ ಕಾರಣದಿಂದ ತಮ್ಮ ಹೊಟ್ಟೆಪಾಡಿಗಾಗಿ ದವಸ-ದಾನ್ಯಗಳನ್ನು ಕಳ್ಳತನ ಮಾಡುತ್ತಿದ್ದ ಈ ಜನರಿಗೆ ಒಂದು ಶಾಪವಾಗಿಯೇ ಪರಿಣಮಿಸಿದೆ.

ಹರಿಣಶಿಕಾರಿ ಸಮುದಾಯವು ಪುರುಷ ಪ್ರಧಾನತೆಯ ಕುಟುಂಬ ವ್ಯವಸ್ಥೆಯನ್ನು ಹೊಂದಿದ್ದು, ಇಲ್ಲಿ ಮಹಿಳೆಯರ ಸಾಮಾಜಿಕ ಸ್ಥಾನಮಾನಗಳೇನು? ಸಮಾಜದಲ್ಲಿ ಅವರನ್ನು ಯಾವ ರೀತಿ ಪರಿಭಾವಿಸಿಕೊಳ್ಳುತ್ತಾರೆ ಎಂಬುದನ್ನು ನೋಡಿದಾಗ ಅಲ್ಲಿ ಮಹಿಳೆಯರಿಗೆ ಸಮುದಾಯದ ಸಮಾಜದಲ್ಲಿ ಯಾವುದೇ ಸ್ಥಾನಮಾನಗಳಿಲ್ಲ. ಮಹಿಳೆ ಸ್ವಂತ ಅಸ್ತಿತ್ವಕ್ಕೆ ಯಾವುದೇ ಬೆಲೆಯಿಲ್ಲ. ಬಾಹ್ಯ ಪ್ರಪಂಚದ ಅರಿವಿಲ್ಲದೇ ನಾಲ್ಕು ಗೋಡೆಯ ಮದ್ಯೆ ಬಂಧಿತಳನ್ನಾಗಿ ಮಾಡಿದೆ. ವಿವಾಹ, ಕುಟುಂಬ, ಶೈಕ್ಷಣಿಕ, ಆರೋಗ್ಯಿಕ ಸ್ಥಾನಮಾನಗಳಲ್ಲಿ ಮಹಿಳೆಯರು ಅನೇಕ ರೀತಿಯ ತಾರತಮ್ಯಗಳಿಗೆ ಒಳಗಾಗಿರುವಳು. ಪುರುಷನೇ ಎಲ್ಲಾ ನಿರ್ಧಾರಗಳನ್ನು ತೆಗೆದುಕೊಳ್ಳುವವನಾಗಿ ಮಹಿಳೆ ಅದರ ಪರಿಪಾಲಕಳಾಗಿ ಕಂಡುಬರುವಳು. ಇದು ಈ ಸಮುದಾಯದ ಮಹಿಳೆಯರ ಬದುಕಿನ ಒಂದು ಭಾಗವಾಗಿ ಪರಿಣಮಿಸಿದೆ.

ಹರಿಣಶಿಕಾರಿ ಸಮುದಾಯದ ಆರ್ಥಿಕ ಸ್ಥಿತಿಯನ್ನು ನೋಡಿದಾಗ, ಬಡತನದ ಬೇಗೆಯಲ್ಲಿ ಬೆಂದ ಕುಟುಂಬಗಳೇ ಅಧಿಕವಾಗಿವೆ. ಈ ಸಮುದಾಯದ ಆರ್ಥಿಕತೆಯಲ್ಲಿ ಮಹಿಳೆಯರ ಕೊಡುಗೆಗಳೇನು? ದುಡಿಮೆಯಲ್ಲಿ ಎಷ್ಟರ ಮಟ್ಟಿಗೆ ಮಹಿಳೆಯರು ಭಾಗವಹಿಸುತ್ತಾರೆ. ಎಂಬುದನ್ನು ವಿಶ್ಲೇಷಿಸಿದಾಗ ಹರಿಣಶಿಕಾರಿ ಸಮುದಾಯದ ಕುಟುಂಬಗಳು ಅಧಿಕವಾಗಿ ಮಹಿಳೆಯರ ಆರ್ಥಿಕ ಕೊಡುಗೆಯ ಪ್ರತೀಕವಾಗಿದೆ. ಆದಿಮ ಕಾಲಘಟ್ಟದಿಂದ ಕಳ್ಳಬಟ್ಟಿ ಸರಾಯಿ ಮಾಡುವುದನ್ನು ಒಂದು ಕಲೆಯನ್ನಾಗಿ ಬೆಳೆಸಿಕೊಂಡು ಬಂದ ಈ ಸಮುದಾಯವು ಈಗಲೂ ಆ ಕಲೆಯನ್ನು ಮುಂದುವರೆಸಿಕೊಂಡು ಬಂದಿರುವುದು ಇದರ ಇಡಿಯಾದ ಜವಾಬ್ದಾರಿ ಮಹಿಳೆಯರೇ ವಹಿಸಿಕೊಂಡಿರುವರು. ಆದ್ದರಿಂದ ಆರ್ಥಿಕ ಕೊಡುಗೆಯಲ್ಲಿ ಮಹಿಳೆಯರ ಪಾತ್ರ ಮುಖ್ಯವಾಗಿರುವುದು. ಆದರೂ ಕೂಡಾ ಅವರು ಸಂಪಾದಿಸಿದ ಹಣದ ಮೇಲೆ ಅವರಿಗೆ ಹಕ್ಕಿರುವುದರ ಪರ್ಯಾಯವಾಗಿ ಆಯಾ ಕುಟುಂಬದ ಪುರುಷ ಅದರ ಮೇಲೆ ಒಡೆತನವನ್ನು ಹೊಂದಿರುವನು. ಸಾಮಾಜಿಕ

ಮತ್ತು ಲಿಂಗಸಂಬಂಧಿಯ ಅಸಮಾನತೆಯನ್ನು ಹೋಗಲಾಡಿಸಲು ಮುಖ್ಯವಾಗಿ ಮಹಿಳೆಯರು ಆರ್ಥಿಕವಾಗಿ ಸ್ವಾವಲಂಬಿಗಳಾಗಬೇಕು.

ಧಾರ್ಮಿಕ ವಿಚಾರಗಳು, ನಂಬಿಕೆಗಳು, ಆಚರಣೆಗಳ ನಿಯಮಗಳ ಪುರುಷ ಸ್ಥಾಪಿತ ಗ್ರಹಿಕೆಗಳಾಗಿದ್ದು, ಅವು ಮಹಿಳೆಯರನ್ನು ನಿಯಂತ್ರಿಸುವ ಆಕಾರವಾಗಿವೆ. ಹರಿಣಶಿಕಾರಿ ಸಮುದಾಯದ ಧಾರ್ಮಿಕ ಕಟ್ಟುಪಾಡುಗಳು ಮಹಿಳೆಯರನ್ನು ಮಡಿ-ಮೈಲಿಗೆಯ ಸೂತಕವೆಂತಲೋ ಪರಿಭಾವಿಸಿದ್ದುಂಟು. ಇಲ್ಲಿ ಮಹಿಳೆಯರಿಗೆ ಯಾವುದೇ ಸ್ಥಾನವಿಲ್ಲ. ಇಂತಹ ಧಾರ್ಮಿಕ ಆಚರಣೆಗಳ ವಿರೋಧವನ್ನು ಮಾಡಿದವರನ್ನು ಸಮುದಾಯದಿಂದ ಹೊರ ನೂಕಲಾಗುವುದು. ಹರಿಣಶಿಕಾರಿಯಲ್ಲಿರುವ ಧಾರ್ಮಿಕ ಪದ್ಧತಿಗಳು ಮಹಿಳೆಯರ ಮೇಲಿನ ತೀವ್ರತರದ ಶೋಷಣೆಗೆ ಒಳಗಾಗಿರುವಳು ಇಂತಹ ಧಾರ್ಮಿಕ, ಸೈದ್ಧಾಂತಿಕ ನೆಲೆಗಳು ಬೇರೆ ಬೇರೆ ಜಾತಿ, ಧರ್ಮಗಳಲ್ಲಿ ವಿಭಿನ್ನವಾಗಿ ಕಂಡುಬಂದರೂ ಅವುಗಳ ಸ್ವರೂಪ ಒಂದೇ ಆಗಿರುವುದು.

ರಾಜಕೀಯ ಪ್ರವೇಶವು ಆಯಾ ಸಮಾಜದ ಅಭಿವೃದ್ಧಿಯ ಮಟ್ಟವನ್ನು ಗುರುತಿಸುವಲ್ಲಿ ಒಂದು ಪ್ರಮುಖ ಸೂಚಕವಾಗಿದೆ. ಹರಿಣಶಿಕಾರಿ ಸಮುದಾಯದಲ್ಲಿ ಒಳಾಡಳಿತ ರಾಜಕೀಯ ವ್ಯವಸ್ಥೆ ಇರುವುದು. ಇದರಲ್ಲಿ ಕೇವಲ ಪುರುಷ ವರ್ಗಕ್ಕೆ ಮಾತ್ರ ಪ್ರವೇಶ ಇಲ್ಲಿ ಮಹಿಳೆಯರು ಮೂಕ ಪ್ರೇಕ್ಷಕರಾಗಿ ಕುಳಿತಿರಬೇಕು. ಈ ಸಮುದಾಯದ ನಿದರ್ಶನ ಕೇವಲ ಸಣ್ಣಪ್ರಮಾಣದ್ದು, ಆದರೆ ದೇಶದ ರಾಜಕೀಯ ವಲಯಕ್ಕೆ ಬಂದರೂ ಮಹಿಳೆಯರನ್ನು ತಳಪಾತಕ್ಕೆ ತಳ್ಳಲಾಗಿದೆ. ರಾಜಕೀಯ ರಂಗದಲ್ಲಿ ಮಹಿಳೆಯರ ಪ್ರವೇಶ ಕೇವಲ ಗಣನೀಯ. ಇತ್ತೀಚೆಗೆ ಮಹಿಳೆಯರು ರಾಜಕೀಯ ರಂಗದಲ್ಲಿ ಪ್ರವೇಶಿಸಿದರೂ ಕೂಡಾ ಅದು ಕೇವಲ ಓಟ್ ಬ್ಯಾಂಕುಗಳಾಗಿ ರಬ್ಬರ್ ಸ್ಟ್ಯಾಂಪ್ ಮಹಿಳೆಯರಾಗಿ ಕಂಡುಬರುತ್ತಾರೆ.

ಹರಿಣಶಿಕಾರಿ ಸಮುದಾಯದಲ್ಲಿ ಆದಿಮ ಕಾಲಘಟ್ಟದಿಂದ ಆಧುನಿಕ ಕಾಲದವರೆಗೆ ಅನೇಕ ಸಾಂಸ್ಕೃತಿಕ ಬದಲಾವಣೆಯ ಕ್ರಿಯೆಗೆ ಒಳಗಾಗಿರುವುದನ್ನು ಕಾಣಬಹುದು. ಸಾಂಸ್ಕೃತಿಕ ಪಲ್ಲಟಗಳಾದರೂ ಕೂಡಾ ಸ್ವಲ್ಪ ಮಟ್ಟಿನ ಸುಧಾರಣೆ ಮಾತ್ರ ಕಂಡುಬಂದಿರುವುದು. ಆದರೆ ಈ ಸಮುದಾಯವು ಈಗಲೂ ತುಂಬಾ ಹಿಂದುಳಿದ ಜನಾಂಗವಾಗಿದೆ. ಸರಕಾರವು ಇವರನ್ನೆಲ್ಲ ಪರಿಶಿಷ್ಟ ಪಂಗಡಕ್ಕೆ ಸೇರಿಸಿದರೂ ಕೂಡಾ ಸರಕಾರದ ಅನೇಕ ಕಾರ್ಯಕ್ರಮ ಕಾರ್ಯನೀತಿಗಳ ಫಲವನ್ನು ಪಡೆದುಕೊಳ್ಳುವಲ್ಲಿ ವಿಫಲವಾಗಿದ್ದಾರೆ. ಇಡೀ ಸಮುದಾಯ ಎಲ್ಲ ಮಹಿಳೆಯರನ್ನು ಕೇವಲ ಕುಟುಂಬದ ಭಾಗವಾಗಿಯೇ ನೋಡಲಾಗುವುದು. ಹರಿಣಶಿಕಾರಿ ಸಮುದಾಯದಲ್ಲಿಯ ಮೂಢ ನಂಬಿಕೆ ಮಡಿ-ಮೈಲಿಗೆಗಳಂತಹ ಆಚರಣೆಗಳು ಮಹಿಳೆಯರ ಅಭಿವೃದ್ಧಿಗೆ ಅಡ್ಡಿಯನ್ನುಂಟು ಮಾಡಿದೆ. ಪುರುಷ ಮೌಲ್ಯಗಳನ್ನು ಮಹಿಳೆಯರು ಸಹಜ ಗುಣಸ್ವಭಾವವೆಂಬಂತೆ ಮನಸ್ಥಿತಿಯಲ್ಲಿ ಅಂತರ್ಗತವಾಗಿಸಿಕೊಂಡಿದ್ದಾರೆ.

## ಅಧ್ಯಯನದ ಫಲಿತಗಳು

೧. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕುಟುಂಬವನ್ನು ಮಹಿಳೆಯರೇ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ.

೨. ಮಹಿಳೆಯರಿಗೆ ನಿರ್ಧಾರ ತೆಗೆದುಕೊಳ್ಳುವ ಹಕ್ಕಿರುವುದಿಲ್ಲ.

೩. ಕುಟುಂಬದಲ್ಲಿ ಎರಡನೇ ದರ್ಜೆಯ ಪ್ರಜೆಯನ್ನಾಗಿ ನೋಡಲಾಗುವುದು.

೪. ಶೈಕ್ಷಣಿಕವಾಗಿ ಮಹಿಳೆಯರು ಹಿಂದುಳಿದಿದ್ದಾರೆ.

೫. ಅನೇಕ ರೀತಿಯ ಆರೋಗ್ಯ ಸಂಬಂಧೀ ಸಮಸ್ಯೆಗಳಿಂದ ಬಳಲುತ್ತಿದ್ದಾರೆ.

೬. ಧಾರ್ಮಿಕ ಕಟ್ಟುಪಾಡುಗಳು ಮಹಿಳೆಯರ ಶೋಷಣೆಗೆ ಕಾರಣವಾಗಿವೆ.

೭. ಮಹಿಳೆಯರಿಗೆ ಆಸ್ತಿ ಮೇಲೆ ಹಕ್ಕಿರುವುದಿಲ್ಲ.

೮. ಮಹಿಳೆಯ ದುಡಿಮೆಯ ಫಲ ಪುರುಷನ ಕೈ ಸೇರುವುದು. ಮಹಿಳೆಗೆ ಸಂಪಾದನೆಯ ಹಣದ ಮೇಲೆ ಯಾವುದೇ ಹಕ್ಕಿರುವುದಿಲ್ಲ.

೯. ಸರಕಾರದ ಯೋಜನೆಗಳ ಬಗ್ಗೆ ಮಹಿಳೆಯರಿಗೆ ಮಾಹಿತಿ ಇರುವುದಿಲ್ಲ.

೧೦. ಒಟ್ಟಿನಲ್ಲಿ ಪುರುಷ ಪ್ರಧಾನತೆಯ ಕುಟುಂಬ ವ್ಯವಸ್ಥೆಯು ಹರಿಣಶಿಕಾರಿ ಮಹಿಳೆಯರನ್ನು ಒಂದು ಸಾಧನವನ್ನಾಗಿ ಬಳಕೆ ಮಾಡಿಕೊಂಡಿರುವುದನ್ನು ನೋಡಬಹುದು.

## ಅಧ್ಯಯನದ ಮಿತಿಗಳು ಮತ್ತು ಸಾಧ್ಯತೆಗಳು

೧. ಹರಿಣಶಿಕಾರಿ ಸಮುದಾಯದ ಮಹಿಳೆಯರ ಬದುಕನ್ನು ಕೇಂದ್ರೀಕರಿಸಿ ಅಧ್ಯಯನವನ್ನು ಕೈಗೊಳ್ಳಲಾಗಿರುವ ಅಧ್ಯಯನದ ಮಿತಿಗಳಲ್ಲಿ ಒಂದಾಗಿದೆ.

೨. ಈ ಅಧ್ಯಯನವು ಕೇವಲ ವಿಜಾಪುರ ನಗರಕ್ಕೆ ಮಾತ್ರ ಸೀಮಿತವಾಗಿದೆ.

## ಸಾಧ್ಯತೆಗಳು

೧. ಅಭಿವೃದ್ಧಿ ಮೀಮಾಂಸೆಯಲ್ಲಿ ಮಹಿಳೆಯರ ಸ್ಥಾನಮಾನಗಳ ಬಗೆಗೆ ವಿಶ್ಲೇಷಿಸಬಹುದು.

ಹರಿಣಶಿಕಾರಿ ಮಹಿಳೆಯರ ಸಮಾಜೋ-ಆರ್ಥಿಕ ಬದುಕಿನ ಬಗೆಗೆ ಪ್ರತ್ಯೇಕವಾಗಿ ಅಧ್ಯಯನವನ್ನು ಕೈಗೊಳ್ಳಬಹುದು.

# ಅನುಬಂಧಗಳು

೧. ಆಕರ ಗ್ರಂಥಸೂಚಿಗಳು
೨. ವಕ್ತೃವಿವರ
೩. ಪ್ರಶ್ನಾವಳಿ ಮಾದರಿ
೪. ಛಾಯಾಚಿತ್ರಗಳು

## ಆಕರ ಗ್ರಂಥಗಳು


೧. ಅಕ್ಕಮಹಾದೇವಿ; ೧೯೮೪; ಬುಡಕಟ್ಟು ನ್ಯಾಯ; ಮೈಸೂರು ವಿಶ್ವವಿದ್ಯಾಲಯ ಪ್ರಕಾಶನ; ಮೈಸೂರು

೨. ಅಮರೇಶ ನುಗಡೋಣಿ(ಸಂ); ೨೦೦೮; ಕನ್ನಡ ಸಂಶೋಧನೆಯ ವೈಧಾನಿಕತೆಗಳು; ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಇಂದಿರಾ ಆರ್; ೨೦೦೨; ಮಹಿಳೆ ಸಮಾಜ ಮತ್ತು ಸಂಸ್ಕೃತಿ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಉಷಾ ಎಂ.; ೨೦೦೪; ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು; ಕನ್ನಡ ವಿಶ್ವವಿದ್ಯಾಲಯ, ಹಂಪಿ

೫. ಗಾಯತ್ರಿ ನಾವಡ; ೧೯೯೭; ವಿರಚನೆ; ಎನ್.ಆರ್.ಎ.ಎಮ್. ಪ್ರಕಾಶನ, ದಕ್ಷಿಣ ಕನ್ನಡ

೬. ಗಾಯತ್ರಿ ನಾವಡ; ೨೦೦೩; ಮಹಿಳಾ ಸಂಕಥನ ; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೭. ಚಂದ್ರಶೇಖರ್ ಟಿ.ಆರ್; ೨೦೦೮; ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು; ಕನ್ನಡ ವಿಶ್ವವಿದ್ಯಾಲಯ, ಹಂಪಿ

೮. ಜಯಲಕ್ಷ್ಮಿ ಕೆ.; ೨೦೦೬; ಹೆಣ್ಣು ಅಸ್ತಿತ್ವದ ಹೋರಾಟದಲ್ಲಿ; ಅನಾವರಣ ಪ್ರಕಾಶನ, ಬೆಂಗಳೂರು

೯. ಜ್ಯೋತಿ ಶಶಿಕುಮಾರ; ೨೦೦೭; ಮಹಿಳಾ ಸಾಮಾಜಿಕತೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ದಾರಿದೀಪ; ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು

೧೧. ದೇವಿ ಪ್ರಸಾದ ಚಟ್ಟೋಪಾಧ್ಯಾಯ; ೨೦೦೪; ಮಾತೆಯರು ಮಾನ್ಯರಾಗಿದ್ದಾಗ; ನವಕರ್ನಾಟಕ ಪ್ರಕಾಶನ ಪ್ರೈ.ಲಿ., ಬೆಂಗಳೂರು

೧೨. ಪಾರ್ವತಮ್ಮ; ೨೦೦೭; ಆದಿವಾದಿ ಸಮುದಾಯಗಳ ಅಭಿವೃದ್ಧಿ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩. ಪ್ರಭಾಕರ ಎ.ಎಸ್.; ೨೦೦೦; ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು; ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೪. ಪ್ರಭಾಕರ ಎ.ಎಸ್.; ೨೦೦೪; ಬುಡಕಟ್ಟು ಅಭಿವೃದ್ಧಿ ಮೀಮಾಂಸೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೫. ಪ್ರಭಾಕರ ಎ.ಎಸ್.; ೨೦೦೬; ಆದಿವಾಸಿ ಅಖ್ಯಾನ; ಸಿದ್ದಾರ್ಥ ಪ್ರಕಾಶನ, ಹೊಸಪೇಟೆ

೧೬. ಪ್ರಶಾಂತ ಎಚ್.ಡಿ.(ಸಂ); ೨೦೦೦; ಜನಸಮುದಾಯ ಸಂಪುಟ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೭. ಪ್ರಹ್ಲಾದ ಬೆಟಗೇರಿ; ೧೯೯೩; ಅಡವಿ ಬೆಂಚರ ಸಂಸ್ಕೃತಿ; ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೮. ಪ್ರೇಮಾಸಿರ್ಸೆ; ೨೦೦೬; ಮಹಿಳೆ ಸಮಾಜ ಮತ್ತು ಸವಾಲುಗಳು; ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು

೧೯. ಮಾಧವ ಐತಾಳ್; ೨೦೦೫; ಬತ್ತದ ಚಿಲುಮೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦. ಮಧು ಗುಂಡ್ಲುಪೇಟೆ; ೨೦೦೨; ಕರ್ನಾಟಕ ಬುಡಕಟ್ಟು ಜನಾಂಗಗಳ ಅಭಿವೃದ್ಧಿ; ಅಕ್ಷತ ಪ್ರಕಾಶನ, ಮೈಸೂರು

೨೧. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಯೋಜನೆಗಳ ಕೈಪಿಡಿ; ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯ; ಕರ್ನಾಟಕ ವಿಧಾನ ಮಂಡಲ, ಬೆಂಗಳೂರು

೨೨. ಮೈತ್ರಿ ಕೆ.ಎಂ.; ೨೦೦೨; ಬುಡಕಟ್ಟು ಕುಲಕಸಬುಗಳು; ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೩. ಬಾಗಡೆ ಜೆ.ವಿ.; ೨೦೦೮; ಕಂಜರ ಭಾವ; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೨೪. ರಾಜಪ್ಪ ದಳವಾಯಿ ಆರ್; ೧೯೯೩; ಹಕ್ಕಿಪಿಕ್ಕಿಯರ ಸಂಸ್ಕೃತಿ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೫. ರಮೇಶ ಸ.ಚಿ.; ೨೦೦೫; ಅಲೆಮಾರಿಗಳ ಸ್ಥಿತಿಗತಿ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೬. ರಹಮತ್ ತರೀಕೆರೆ; ೨೦೦೯; ಕನ್ನಡ ಸಂಶೋಧನೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೭. ಲಕ್ಕಪ್ಪಗೌಡ ಎಚ್.ಜೆ.; ೨೦೦೦; ಕರ್ನಾಟಕ ಬುಡಕಟ್ಟು ಸಂಪುಟ-೨; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೨೮. ಲಕ್ಕಿ ಪೃಥ್ವಿರಾಜ ಮತ್ತು ಶಿಕಾರಿಮು ಎಚ್.ಪಿ; ೨೦೦೮; ಪಾರ್ದ್ವಿ; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೨೯. ವಿಜಯಾದಬ್ಬೆ; ೧೯೯೭; ನಾರಿ-ದಾರಿ-ದಿಗಂತ; ರಚನಾ ಪ್ರಕಾಶನ; ಮೈಸೂರು

೩೦. ವಿಠಲರಾವ್ ಗಾಯಕ್ವಾಡ್; ೨೦೦೩; ಲಜ್ಜಾಗೌರಿ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೧. ಶ್ರೀಧರ ಎಂ.; ೨೦೦೬; ಪಂಚಾಯತ್ ಸಂಸ್ಥೆಯ ಸಾಮಾಜಿಕ ಆಯಾಮಗಳು; ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೨. ಶ್ರೀಮತಿ ಎಚ್.ಎಸ್.; ೧೯೯೭; ಚಹರೆ; ಇಳಾ ಪ್ರಕಾಶನ; ಬೆಂಗಳೂರು

೩೩. ಶ್ರೀಮತಿ ಎಚ್.ಎಸ್.; ೨೦೦೨; ಗರ್ಭಾಶಯ ಮಹಿಳೆಯ ಶಕ್ತಿ ಕೇಂದ್ರ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೪. ಶ್ರೀಮತಿ ಎಚ್.ಎಸ್.(ಸಂ); ೨೦೦೬; ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೫. ಶೈಲಜಾ ಹಿರೇಮಠ; ೧೯೯೯; ಪಾತರದವರು; ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೬. ಶೈಲಜಾ ಹಿರೇಮಠ; ೨೦೦೪; ಮಾತೃ ಪ್ರಧಾನ ಪರಿಕಲ್ಪನೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೭. ಸರೋಜ ಕೆ.; ೨೦೦೧; ಮಹಿಳೆ ಮತ್ತು ಆರೋಗ್ಯ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೮. ಸರೋಜ ಕೆ.; ೨೦೦೮; ಮಹಿಳಾ ಆರೋಗ್ಯ; ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೯. ಹೇಮಲತಾ ಎಚ್.ಎಮ್.; ೨೦೦೪; ಮಹಿಳಾ ಅಧ್ಯಯನ ಭಾಗ-೧; ಡಿ.ವಿ.ಕೆ.ಮೂರ್ತಿ, ಮೈಸೂರು

೪೦. ಹೇಮಲತಾ ಎಚ್.ಎಮ್.; ೨೦೦೪; ಮಹಿಳಾ ಅಧ್ಯಯನ ಭಾಗ-೨; ಡಿ.ವಿ.ಕೆ.ಮೂರ್ತಿ, ಮೈಸೂರು

೪೧. ಹೇಮಲತಾ ಎಚ್.ಎಮ್.; ೨೦೦೬; ಮಹಿಳಾ ಅಧ್ಯಯನ ಭಾಗ-೩; ಡಿ.ವಿ.ಕೆ.ಮೂರ್ತಿ, ಮೈಸೂರು

೪೨. ಹೇಮಲತಾ ಎಚ್.ಎಮ್.; ೨೦೦೭; ಮಹಿಳಾ ಅಧ್ಯಯನ ಭಾಗ-೪; ಡಿ.ವಿ.ಕೆ.ಮೂರ್ತಿ, ಮೈಸೂರು

43. James M. Campbell(Bijapur); 2001; Gazetter of India; Government of Karnataka

44. Laurence D.Sovech S. J. ; Haruna Shikaris

45. Notes on Criminal tribe in Bombay presidency; 1908

46. S.A. Chidananda P.R. Prasad ; 1998; Encyclopedia profile of Indian Tribe; Discovery publishing house; New Delhi

47. Channa S.M.; 2004; Encyclopedia profile of Indian Tribe & Castes; 17Vol; Cosmo publication ; New Delhi

# ವಕ್ತೃಗಳು

೧. ಹೆಸರು : ಶಿವಾಜಿ ಚೌವ್ಹಾಣ
ವಯಸ್ಸು : ೪೯
ಲಿಂಗ : ಗಂಡು
ಊರು : ಬಾಗಲಕೋಟೆ

೨. ಹೆಸರು : ಶಾಮ ಕಾಳೆ
ವಯಸ್ಸು : ೨೮
ಲಿಂಗ : ಗಂಡು
ಊರು : ಬಾಗಲಕೋಟೆ

೩. ಹೆಸರು : ಶಂಕರ ಹರಿಣಶಿಕಾರಿ
ವಯಸ್ಸು : ೩೬
ಲಿಂಗ : ಗಂಡು
ಊರು : ವಿಜಾಪುರ

೪. ಹೆಸರು : ಮಂಜುಳಾ ಕಾಳೆ
ವಯಸ್ಸು : ೨೫
ಲಿಂಗ : ಹೆಣ್ಣು
ಊರು : ವಿಜಾಪುರ

೫. ಹೆಸರು : ಮಂಗಳಾಬಾಯಿ
ವಯಸ್ಸು : ೪೯
ಲಿಂಗ : ಹೆಣ್ಣು
ಊರು : ವಿಜಾಪುರ

೬. ಹೆಸರು : ಗಿರಿಜಾ ನಾ. ಕಾಳೆ
ವಯಸ್ಸು : ೬೦
ಲಿಂಗ : ಹೆಣ್ಣು
ಊರು : ವಿಜಾಪುರ

೭. ಹೆಸರು : ವಾಸುದೇವ ಕಾಳೆ
ವಯಸ್ಸು : ೩೭
ಲಿಂಗ : ಗಂಡು
ಊರು : ವಿಜಾಪುರ

# ಹರಿಣಶಿಕಾರಿ ಸಮುದಾಯದ ಮಹಿಳೆಯರ ಬದುಕು

## ವೈಯಕ್ತಿಕ ವಿವರ

೧. ಹೆಸರು :

೨. ವಯಸ್ಸು :

೩. ಸ್ವಂತ ಊರು :

೪. ಭಾಷೆ :

೫. ಧರ್ಮ :

೬. ವಿವಾಹದ ವಯಸ್ಸು :

ಅ) ೦-೪ ಬ)೫-೧೦ ಕ)೧೦-೨೦ ಬ)೨೦-೨೫

೭. ಉದ್ಯೋಗ :

೮. ಮಕ್ಕಳ ಸಂಖ್ಯೆ :

ಅ) ಗಂಡು ಬ) ಹೆಣ್ಣು

೯. ಕುಟುಂಬದ ಸದಸ್ಯರ ಸಂಖ್ಯೆ :

೧೦. ಯಾವ ಸಂತಾನಕ್ಕೆ ಹೆಚ್ಚಿನ ಪ್ರಾಧಾನ್ಯತೆ ಇದೆ?

ಅ) ಗಂಡು ಬ) ಹೆಣ್ಣು

೧೧. ಶೈಕ್ಷಣಿಕ ಮಟ್ಟ

೧೨. ಗಂಡನ ಶಿಕ್ಷಣ ಮಟ್ಟ

೧೩. ಮಕ್ಕಳ ಶೈಕ್ಷಣಿಕ ಮಟ್ಟ

ಅ) ಪ್ರಾಥಮಿಕ ಶಿಕ್ಷಣ ಬ) ಪ್ರೌಢಶಿಕ್ಷಣ ಕ) ಪದವಿ ಪೂರ್ವ ಶಿಕ್ಷಣ

೧೪. ಕುಟುಂಬದ ಸಂಪೂರ್ಣ ಜವಾಬ್ದಾರಿ ಯಾರ ಮೇಲಿದೆ?

ಅ) ನಿಮ್ಮ ಮೇಲೆ ಬ) ನಿಮ್ಮ ಗಂಡನ ಮೇಲೆ ಕ) ಇಬ್ಬರ ಮೇಲೆ

೧೫. ಕುಟುಂಬದಲ್ಲಿ ಮಕ್ಕಳ ಶಿಕ್ಷಣ, ಮದುವೆಯ ವಿಷಯದಲ್ಲಿ ಯಾರ ನಿರ್ಣಯವನ್ನು ತೆಗೆದುಕೊಳ್ಳುತ್ತಾರೆ?

ಅ) ಗಂಡ ಬ) ಹೆಂಡತಿ ಕ) ಹಿರಿಯರು ಡಿ) ಎಲ್ಲರೂ

೧೬. ಮದುವೆ ವಿಷಯದಲ್ಲಿ ಹೆಣ್ಣು ಮಕ್ಕಳಿಗೆ ಸ್ವಾತಂತ್ರ್ಯವಿದೆಯೇ?

ಅ) ಹೌದು ಬ) ಇಲ್ಲ

೧೭. ಮುದವೆಯಾದ ನಂತರ ಹೆಣ್ಣು ಗಂಡನ ಮನೆಯಲ್ಲಿ ಇರುತ್ತಾಳೋ? ಅಥವಾ ತಂದೆ ತಾಯಿಯರ ಮನೆಯಲ್ಲಿ ಇರುತ್ತಾಳೋ?

ಅ) ತಂದೆ-ತಾಯಿ ಬ) ಗಂಡ

೧೮. ಸಂತಾನವನ್ನು ಯಾರ ಮೂಲಕ ಗುರುತ್ತಿಸುತ್ತಾರೆ?

ಅ) ತಂದೆ ಬ) ತಾಯಿ

೧೯. ವಿವಾಹ ಕಡ್ಡಾಯವಾಗಿದೆಯೇ?

ಅ) ಹೌದು ಬ) ಇಲ್ಲ

೨೦. ಕನ್ಯಾ ಶುಲ್ಕ ತೆಗೆದುಕೊಳ್ಳುತ್ತೀರಾ? ಮೊದಲಿನಿಂದಲೂ ಬಂದ ಸಂಪ್ರದಾಯವೇ?

ಅ) ಹೌದು ಬ) ಇಲ್ಲ

೨೧. ವರದಕ್ಷಿಣೆ ತೆಗೆದುಕೊಳ್ಳುತ್ತೀರಾ?

ಅ) ಹೌದು ಬ) ಇಲ್ಲ

೨೨. ಮದುವೆಯಲ್ಲಿ ಕೊಟ್ಟ ಮಾತುಗಳ ಮೇಲೆ ಮಹಿಳೆಗೆ ಅಧಿಕಾರವಿದೆಯೇ?

ಅ) ಹೌದು ಬ) ಇಲ್ಲ

೨೩. ತಾಯ್ತನ ಕಡ್ಡಾಯವಾಗಿದೆಯೇ?

೨೪. ಬಂಜೆಯನ್ನು ಯಾವ ರೀತಿ ನೋಡಲಾಗುತ್ತಿದೆಯೇ?

೨೫. ಗಂಡ ಸತ್ತರೆ ಮರುಮದುವೆಗೆ ಅವಕಾಶವಿದೆಯೇ? ಗಂಡನ ತಮ್ಮನಿಗೆ ಅಥವಾ ಅಣ್ಣನಿಗೆ ಕೊಟ್ಟು ವಿವಾಹ ಮಾಡುತ್ತಾರೆಯೇ?

ಅ) ಹೌದು ಬ) ಇಲ್ಲ

೨೬. ನೀವು ವಲಸೆ ಬಂದಿದ್ದೀರಾ?

೨೭. ನಿಮ್ಮ ಆಹಾರ ಪದ್ಧತಿ

ಅ) ಸಸ್ಯಾಹಾರ ಬ)ಮಾಂಸಾಹಾರ

೨೮. ಆಹಾರ ಸೇವನೆಯಲ್ಲಿ ಗಂಡು ಮೊದಲು ನಂತರ ಹೆಣ್ಣು ಕಲ್ಪನೆ ಇದೆಯೇ?

೨೯. ಮದ್ಯ ಸೇವನೆ ಇದೆಯೇ? ಈ ಮದ್ಯ ಸೇವನೆಯಿಂದ ಗಂಡಸರೊಂದಿಗೆ ಕುಳಿತು ಸಮಾನವಾಗಿ ಸೇವನೆ ಮಾಡುತ್ತೀರಾ?

ಅ) ಹೌದು ಬ) ಇಲ್ಲ

೩೦. ನಿಮ್ಮ ಕುಟುಂಬದ ಜಗಳವನ್ನು ಯಾವ ರೀತಿ ಬಗೆಹರಿಸುತ್ತೀರಿ?

ಅ) ಕುಟುಂಬದ ಹಿರಿಯರ ಸಲಹೆಯಿಂದ ಬ) ವೈಯಕ್ತಿಕವಾಣಿ ಕ) ಪಂಚಾಯಿತಿ ಮೂಲಕ

೩೧. ಪಂಚಾಯಿತಿ ಪದ್ಧತಿಯಿದೆಯೇ?

ಅ) ಹೌದು ಬ) ಇಲ್ಲ

೩೨. ಪಂಚಾಯಿತಿಯಲ್ಲಿ ನೀವು ಭಾಗವಹಿಸುತ್ತೀರಾ?

ಅ) ಹೌದು ಬ) ಇಲ್ಲ

೩೩. ಪಂಚಾಯಿತಿ ಅಪರಾಧಕ್ಕೆ ಯಾವ ರೀತಿ ಶಿಕ್ಷೆ ವಿಧಿಸುತ್ತದೆ?

೩೪. ಮುಟ್ಟಿನ ಬಗ್ಗೆ ಇರುವ ಆಚರಣೆಗಳಾವುವು?

೩೫. ಯೋನಿ ಶುಚಿತ್ವದ ಪರಿಕಲ್ಪನೆ ಇದೆಯೇ?

ಅ) ಹೌದು ಬ) ಇಲ್ಲ

೩೬. ಗರ್ಭಿಣಿಯಾದಾಗಿನ ಆಚರಣೆಗಳಾವುವು?

**ಆರ್ಥಿಕ ಮಟ್ಟ**

೩೭. ದುಡಿಮೆಯ ವಲಯಗಳಾವುವು?

೩೮. ಉತ್ಪಾದನೆಯ ವಲಯದತ್ತ ಲಿಂಗಾಧಾರಿತವಾಗಿ ವಿಂಗಡಿಸಲ್ಪಿದೆಯೇ?

೩೯. ಉತ್ಪಾನೆಯ ಹಂಚಿಕ ಮತ್ತು ಲಾಭ ಇದೆಯೇ? ಅದರಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಇದೆಯೇ?

೪೦. ಕೂಲಿ ಕೆಲಸದಲ್ಲಿ ತಾರತಮ್ಯ ಇದೆಯೇ?

೪೧. ಗಂಡನ ಮನೆಯಲ್ಲಿ ಅಥವಾ ತಂದೆಯ ತಾಯಿಯ ಮನೆಯಲ್ಲಿ ಆಸ್ತಿ ಪಡೆದುಕೊಂಡಿದ್ದಾರೆಯೇ?

**ವೈವಾಹಿಕ ಸ್ಥಾನಮಾನ**

೪೨. ಬಹುಪತ್ನಿತ್ವಕ್ಕೆ ಅಥವಾ ಪತೀತ್ವ ಆಚರಣೆಯಿದೆಯೇ?

ಅ) ಹೌದು ಬ) ಇಲ್ಲ

೪೩. ವಿದವಾ ಪುನರ್ ವಿವಾಹಕ್ಕೆ ಮನ್ನಣೆ ಇದೆಯೇ?

ಅ) ಹೌದು ಬ) ಇಲ್ಲ

೪೪. ಮರುವಿವಾಹವಾದ ಮಹಿಳೆಗೆ ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಕಾಶವಿದಯೇ?

ಅ) ಹೌದು ಬ) ಇಲ್ಲ

೪೫. ವಿವಾಹ ವಿಚ್ಛೇಧನಕ್ಕೆ ಅವಕಾಶವಿದೆಯೇ?

ಅ) ಹೌದು ಬ) ಇಲ್ಲ

೪೬. ಹೌದು ಎಂದಾದರೆ, ಯಾವ ರೀತಿಯಲ್ಲಿ ವಿವಾಹ ವಿಚ್ಛೇಧನಕ್ಕೆ ಒಳಗಾಗುತ್ತೀರಾ?

ಅ) ಕೋರ್ಟಿಗೆ ಹೋಗಿ ಬ) ಹಿರಿಯರ ಮೂಲಕ ಕ) ಪಂಚಾಯಿತಿ ಮೂಲಕ

೪೭. ಪಾತಿವ್ರತ್ಯಕ್ಕೆ ಮಹತ್ವವನ್ನು ಕೊಡುತ್ತೀರಾ?

ಅ) ಹೌದು ಬ) ಇಲ್ಲ

೪೮. ವ್ರತಾಚಾರಣೆಗಳು ಕೈಗೊಳ್ಳುತ್ತೀರಾ? ಅವು ಯಾವುವು? ಯಾಕೆ?

ಅ) ಹೌದು ಬ) ಇಲ್ಲ

೪೯. ನಿಮ್ಮ ಜನಾಂಗದ ಕುಲದೇವರು

೫೦. ಮದುವೆ ಆಚರಣೆಗಳು

೫೧. ಮರಣದ ಸಂದರ್ಭದಲ್ಲಿನ ಆಚರಣೆಗಳು

೫೨. ಸರಕಾರದ ಯೋಜನೆಗಳ ಫಲವನ್ನು ಪಡೆದುಕೊಂಡಿದ್ದೀರಾ?

ಅ) ಹೌದು ಬ) ಇಲ್ಲ

೫೩. ಹೌದು ಎಂದಾದರೆ, ಯಾವ ಯೋಜನೆಗಳನ್ನು ಪಡೆದುಕೊಂಡಿದ್ದೀರಿ.

# ಛಾಯಾಚಿತ್ರಗಳು



ಹರಿಣ ಶಿಕಾರಿ ವಿವಾಹ



ಹರಿಣ ಶಿಕಾರಿ ಮಹಿಳೆ



ಜೋಳಿಗೆಯನ್ನು ತೂಗುತ್ತಿರುವ ಮಹಿಳೆ



ಶೈಕ್ಷಣಿಕ ಸ್ಥಾನಮಾನ



ಕಳ್ಳಭಟ್ಟಿ ತಯಾರಿಕೆಯಲ್ಲಿ ನಿರತಳಾದ ಮಹಿಳೆ



ದಂಡಿನ ದುರ್ಗಮ್ಮನ ಜಾತ್ರೆ



ರೊಟ್ಟಿ ಹಬ್ಬದಲ್ಲಿ ನಿರತ ಮಹಿಳೆ



ಗಂಗಾ ಸ್ನಾನಕ್ಕೆ ಸಜ್ಜಾಗಿರಿಸುವ ಪ್ರಾಚೀನ ದೇವತೆಗಳ ಪೂಜೆ



ಬಾನು ಬೆಡಗಿನ ಪೂಜಾರಿ



ರೊಟ್ಟಿ ಹಬ್ಬದ ಪೂಜೆ



ಹರಿಣಶಿಕಾರಿ ಪಂಚಾಯಿತಿ ಕಟ್ಟೆ

